# ದಾಸ ಸಾಹಿತ್ಯ ಸೌರಭ

ಲೇಖಕ - ಸಂಗ್ರಾಹಕ

**ಶ್ರೀನಿವಾಸ ಸು. ಮಠದ,** ಬಿ. ಎಸ್‌ಸಿ. ಎಮ್. ಎ.

ಗೀತಾ ಪ್ರಕಾಶನ

ಅಜರೇಕರ ಚಾಳ, ಗೋಡಬೋಲೆಮಾಳಾ, ವಿಜಾಪುರ

Dasa Sahitya Sourabha (in Kannada)
by Srinivas S. Mathad B.Sc., M.A.,



First Edition : 1993

1000 Copics

---

This book is published with the financial Assistance of Tirumala Tirupati Devasthanams under their scheme "Aid to publish religious books"

---



Price : Rs. 18/-



*Printers :*

S. I. Akalwadi
Manohar Printing Press
Market, Dharwad - 580 001

ದಿನಾಂಕ ೯–೩–೧೯೯೩ ರಂದು ನಮ್ಮನ್ನಗಲಿದ
ಕುಂ. ಸೌ. ಮಾತೃಶ್ರೀ ಅಂಬಾಬಾಯಿಯವರ
ಸ್ಮರಣಾರ್ಥ

ನಮ್ಮ ಕುಲದೈವ
ಶ್ರೀಮದ್ ಹನುಮಂ ಭೀಮಂ ಮಧ್ವಾಂತರ್ಗತ

**ಶ್ರೀ ತಿರುಪತಿ ತಿಮ್ಮಪ್ಪನ**

ಅಡಿದಾವರೆಗಳಲ್ಲಿ

**ಭಕ್ತಿಪೂರ್ವಕ ಸಮರ್ಪಿತ**

|| ಶ್ರೀಃ ||

|| ಶ್ರೀಮನ್ ಮೂಲರಾಮೋ ವಿಜಯತೇ ||

# — ಅನುಗ್ರಹ ಪತ್ರ —

## ಶ್ರೀ ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು ಶ್ರೀಮದುತ್ತರಾದಿ ಮಠ, ಬೆಂಗಳೂರು—

ಶ್ರೀ ವ್ಯಾಸ ಸಾಹಿತ್ಯದ ಸಾರವನ್ನು ಕನ್ನಡ ಮಾಧ್ಯಮದಲ್ಲಿ ಪದ್ಯರೂಪದಲ್ಲಿ ತಂದ ಕೀರ್ತಿ ನಮ್ಮ ಹರಿದಾಸರಿಗೆ ಸಲ್ಲುತ್ತದೆ. ಶ್ರೀ ಶ್ರೀ ನರಹರಿತೀರ್ಥ ಶ್ರೀಪಾದಂಗಳವರಿಂದ ಹರಿದು ಬಂದ ಈ ಕನ್ನಡ ದಾಸಸಾಹಿತ್ಯವು ಪುರಂದರದಾಸರೇ ಮುಂತಾದ ದಾಸವರೇಣ್ಯರಿಂದ ಇನ್ನೂ ಅಭಿವೃದ್ಧಿಯನ್ನು ಹೊಂದಿ ಊರ್ಜಿತ ಸ್ಥಿತಿಗೆ ಬಂದು ಮುಟ್ಟಿತು. ಶ್ರೀ ಪುರಂದರದಾಸರ ಕೃತಿಗಳು "ಪುರಂದರೋಪ ನಿಷತ್" ಎಂಬ ಹೆಗ್ಗಳಿಕೆಯನ್ನು ಪಡೆದವು. ಈ ದಿವ್ಯ ಪರಂಪರೆಯಲ್ಲಿ ಅನೇಕ ಹರಿದಾಸರು ಶ್ರೀಮನ್‌ಮಧ್ವಮತದ ಅಚ್ಚುಕಟ್ಟಿಗೆ ಸೇರಿದವರಾಗಿ ನೀತಿ ಬೋಧಕ ತಾತ್ವಿಕ ಕೃತಿಗಳನ್ನು ರಚಿಸಿ ಮಹದುಪಕಾರ ಮಾಡಿದ್ದಾರೆ.

ಪ್ರಕೃತ ನಮ್ಮ ಪ್ರಿಯಶಿಷ್ಯ ಸುಬ್ಬಣ್ಣ ಮಠದ ಈತನ ಪುತ್ರ ಚಿ. ಶ್ರೀನಿವಾಸನು ವೇದಾಂತದ ಅಧ್ಯಯನವನ್ನು ಮಾಡುತ್ತಿರುವ ಕಾಲದಲ್ಲಿ ಶ್ರೀ ಹರಿದಾಸರ ಪದ್ಯ ಗಳನ್ನು ಕೂಡ ಅಭ್ಯಾಸಮಾಡಿ ದಾಸರು ತಮ್ಮ ಪದ್ಯಗಳಲ್ಲಿ ಯಾವ ಯಾವ ಗ್ರಂಥ ಗಳ ಶ್ಲೋಕಗಳ ಸಾರವನ್ನು ಸಂಗ್ರಹಿಸಿದ್ದಾರೆಂಬುದನ್ನು ಪ್ರಸ್ತುತ ಕೃತಿ "ದಾಸ ಸಾಹಿತ್ಯ ಸೌರಭ"ದಲ್ಲಿ ತೋರಿಸಿಕೊಡುವ ಪ್ರಯತ್ನಮಾಡಿದ್ದಾನೆ. ಅವನ ಪ್ರಯತ್ನ ಯೋಗ್ಯವೂ ಆಗಿದೆ.

ಆ ಭಗವಂತನ ಸೇವಾರೂಪವಾಗಿ ಮಾಡಿದ ಈ ವಿದ್ಯಾರ್ಥಿಗೆ ಶ್ರೀ ಹರಿ-ವಾಯುಗುರುಗಳು ಇನ್ನೂ ಹೆಚ್ಚಿನ ಅಧ್ಯಯನ ಮಾಡುವಂತೆ ಅನುಗ್ರಹಿಸಲಿ ಎಂಬುದಾಗಿ ನಮ್ಮ ಉಪಾಸ್ಯಮೂರ್ತಿ ಶ್ರೀಮನ್ ಮೂಲರಾಮದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

ಶ್ರೀ ಶ್ರೀ ಸತ್ಯಪ್ರಮೋದತೀರ್ಥ
ಶ್ರೀಪಾದಂಗಳವರು

ತಾ. ೨೩-೫-೯೩
ಕ್ಯಾಂಪ-ಧಾರವಾಡ

|| ಶ್ರೀಃ ||

# ಆಶೀರ್ವಚನ

ನಮ್ಮ ಪ್ರಿಯಶಿಷ್ಯ ಶ್ರೀನಿವಾಸ ಸು. ಪಾಠದ ಈತನು ವೇದಾಂತದ ಅಭ್ಯಾಸವನ್ನು ಮಾಡುತ್ತಿರುವ ಒಬ್ಬ ವಿದ್ಯಾರ್ಥಿಯು. ಇವನು ದಾಸಸಾಹಿತ್ಯವನ್ನು ಅಭ್ಯಾಸಮಾಡಿ ಆ ದಾಸರ ಪದ್ಯಗಳಿಗೆ ಗೀತೆ, ಉಪನಿಷತ್ತು, ಭಾಗವತ ಮುಂತಾದ ಉದ್ಗ್ರಂಥಗಳಿಂದ ಸಮಾಪ್ತಾ, ಶ್ಲೋಕಗಳನ್ನು ಆರಿಸಿ ವಿವರಣೆ ನೀಡಿದ್ದಾನೆ. ಈ ಗ್ರಂಥಕ್ಕೆ "ದಾಸ ಸಾಹಿತ್ಯ ಸೌರಭ" ವೆಂಬ ನಾಮಧೇಯವು ಸಾರ್ಥಕವೂ ಆಗಿದೆ.

ಇಂಥ ಪ್ರಯತ್ನವು ಶ್ರೀಹರಿವಾಯುಗುರುಗಳಿಗೆ ಪ್ರೀತಿಯನ್ನುಂಟುಮಾಡಲಿ ಎಂದು ಶ್ರೀ ಬಾದರಾಯಣಾಭಿನ್ನ ಗೋವಿಂದರಾಜರಲ್ಲಿ ಪ್ರಾರ್ಥಿಸುತ್ತೇವೆ.

ಇತಿ–

ತಾ॥ ೧೩–೫–೯೩
ವಿಜಾಪುರ

ಪಂ॥ ತ್ರಿವಿಕ್ರಮಾಚಾರ್ಯ ಹ. ಉಮರ್ಜಿ
ಶ್ರೀ ತ್ರಿವಿಕ್ರಮ ದೇವಸ್ಥಾನದ ಹತ್ತಿರ
ಗೋಡಬೋಲೆ ಮಾಳಾ, ವಿಜಯಪೂರ

|| ಶ್ರೀಃ ||

# ಮುನ್ನುಡಿ

ಈ ಪ್ರಪಂಚದಲ್ಲಿ "ಸುಖಮೇವ ಮೇಸ್ಯಾತ್ ದುಃಖಂ ಮನಾಗಪಿ ಮಾಭೂತ್" ಎಂಬಂತೆ ಪ್ರತಿಯೊಬ್ಬರೂ ಸುಖವನ್ನು ಮಾತ್ರ ಬಯಸುವದು ಕಂಡುಬರುತ್ತದೆ. ದುಃಖ ಯಾರಿಗೂ ಬೇಡ. ಈ ದುಃಖರಹಿತವಾದ ಸುಖವನ್ನು ತಂದುಕೊಡಲು ಸಮರ್ಥನಾದವನು ಆ ಭಗವಂತನೊಬ್ಬನೇ. ಅವನು ಸಮಸ್ತ ಚರಾಚರ ಪ್ರಪಂಚಕ್ಕೆ "ಈಶ". ಜೀವರೆಲ್ಲರೂ ಅವನ ದಾಸರು.

ಇಂಥ "ಈಶ ದಾಸ" ಭಾವವನ್ನು ತೋರಿಸಿಕೊಟ್ಟ ಮೊದಲವ್ಯಕ್ತಿ ಶ್ರೀ ಹನುಮಂತದೇವರೆಂದು ಹೇಳಿದರೆ ತಪ್ಪಾಗದು. ರಾವಣನ ದರ್ಬಾರಿನಲ್ಲಿ ನೀನು ಯಾರು ? ಎಂದು ದೈತ್ಯ ರಾವಣ ಕೇಳಿದಾಗ ಶ್ರೀ ಹನುಮಂತದೇವರು "ದಾಸೋಽಹಂ ಕೋಸಲೇಂದ್ರಸ್ಯ" ಎಂಬುದಾಗಿ ಉತ್ತರ ಕೊಟ್ಟು ಶ್ರೀರಾಮನೊಬ್ಬನೇ ಸ್ವತಂತ್ರ, ಸರ್ವೋತ್ತಮ. ಎಲ್ಲ ಜೀವರು ಅವನ ದಾಸರೇ ಎಂಬುದನ್ನು ಸ್ಪಷ್ಟಪಡಿಸಿದರು.

ನಂತರ ಶ್ರೀ ಮಧ್ವಾಚಾರ್ಯರು ತಮ್ಮ ಅವತಾರ ಕಾಲದಲ್ಲಿ ಪರಮಾತ್ಮನೊಬ್ಬನೇ ಸ್ವತಂತ್ರ. ಜೀವರು ಅಸ್ವತಂತ್ರರು ಅವನ ಅಧೀನರು ಹೀಗೆ ತಿಳಿದು ಉಪಾಸನೆ ಮಾಡುವ ಸುಜೀವಿಗಳು ಈ ಸಂಸಾರಬಂಧನದಿಂದ ಬಿಡುಗಡೆ ಹೊಂದುವರು ಎಂದು ತಿಳಿಸಿಕೊಟ್ಟರು.

ಯ ಏತತ್ ಪರತಂತ್ರಂ ತು ಸರ್ವಮೇವ ಹರೇಃ ಸದಾ ।
ವಶಮಿತ್ಯೇವ ಜಾನಾತಿ ಸಂಸಾರಾನ್ಮುಚ್ಯತೇ ಹಿ ಸಃ ॥ (ತತ್ವವಿವೇಕ)

ಮತ್ತು ಶ್ರೀಮಧ್ವಾಚಾರ್ಯರು ಈಶ-ದಾಸ-ಭಾವವನ್ನು ಪ್ರತಿಬಿಂಬಿಸುವ ಶ್ರೀ ಹರಿಯೇ ಸರ್ವೋತ್ತಮನೆಂದು ಸಿದ್ಧಮಾಡಿ ತೋರಿಸುವ ಅನೇಕ ಗ್ರಂಥಗಳನ್ನು ರಚಿಸಿ ಪರಮಾತ್ಮನನ್ನು ಪ್ರೀತಿ ಪಡಿಸುವ ಸ್ತೋತ್ರಸಾಹಿತ್ಯವನ್ನು ಕೂಡ ಸಂಸ್ಕೃತ ಭಾಷೆಯಲ್ಲಿ ರಚಿಸಿಕೊಟ್ಟು ಮಹೋಪಕಾರ ಮಾಡಿದರು.

ಈ ಸಂಸ್ಕೃತ ಸ್ತೋತ್ರ ಸಾಹಿತ್ಯದಿಂದ ಸ್ಫೂರ್ತಿ ಪಡೆದು ಕನ್ನಡ ಮಾಧ್ಯಮದಲ್ಲಿ ಆ ಭಗವಂತನ ಸ್ತೋತ್ರಗಳನ್ನು, ಮಹಿಮೆಗಳನ್ನು ಅನೇಕ ಹರಿದಾಸರು

ಮಾಡಲು ಉದ್ಯುಕ್ತರಾಗಿ ಶ್ರೀ ವ್ಯಾಸಸಾಹಿತ್ಯದ ಪ್ರಮೇಯಗಳನ್ನೆಲ್ಲ ಕನ್ನಡ ಪದ್ಯ ರೂಪದಲ್ಲಿ ಪ್ರಕಟಪಡಿಸಿದರು. ಇಂಥವರಲ್ಲಿ ಶ್ರೀ ಶ್ರೀ ನರಹರಿತೀರ್ಥ ಶ್ರೀಪಾದಂಗಳವರು ಮೊದಲಿಗರು. ನಂತರ ಬಂದ ಶ್ರೀಶ್ರೀಪಾದರಾಜರು, ಶ್ರೀ ವ್ಯಾಸರಾಯರು, ಶ್ರೀ ವಾದಿರಾಜರು, ಶ್ರೀ ಪುರಂದರದಾಸರು, ಶ್ರೀ ವಿಜಯದಾಸರು, ಶ್ರೀ ಗೋಪಾಲ ದಾಸರು, ಶ್ರೀ ಜಗನ್ನಾಥದಾಸರೇ ಮೊದಲಾದ ಹರಿದಾಸರು ಮಧ್ವಮತದ ಪ್ರಮೇಯಗಳನ್ನು ಕನ್ನಡದಲ್ಲಿ ತಿಳಿಸಿಕೊಡುವ ಅನೇಕ ಪದಪದ್ಯಗಳನ್ನು ರಚಿಸಿ ಕೊಟ್ಟರು.

ಪ್ರಕೃತ ಹರಿದಾಸರ ಪದ್ಯಗಳಲ್ಲಿ ಕೆಲವು ಪದ್ಯಗಳನ್ನು ಆರಿಸಿಕೊಂಡು ಶ್ರೀನಿವಾಸ ಸು. ಮಠದ ಈ ವಿದ್ಯಾರ್ಥಿಯು ಆ ಪದ್ಯಗಳಿಗೆ ವಿವರಣೆ ನೀಡಿ ಶ್ರೀ ಭಗವದ್ಗೀತಾ, ಶ್ರೀ ಮದ್ಭಾಗವತ ಮೊದಲಾದ ಗ್ರಂಥಗಳಲ್ಲಿಯ ಸಮಾಖ್ಯಾ ಶ್ಲೋಕಗಳನ್ನು ಆರಿಸಿ ಈ "ದಾಸಸಾಹಿತ್ಯ ಸೌರಭ" ಕೃತಿಯಲ್ಲಿ ತೋರಿಸಿಕೊಡುವ ಪ್ರಯತ್ನ ಮಾಡಿದ್ದಾನೆ. ಈ ಪ್ರಯತ್ನವು ಅಭಿನಂದನೀಯವಾಗಿದೆ.

ಉದಾಹರಣೆಗೆ : "ಎನಗೊಬ್ಬ ದೊರೆಯು ದೊರಕಿದನು" ಪದ್ಯದಲ್ಲಿ- (ಪುಟ-೩)

ಮಾತಾಪಿತನಾದ ಭ್ರಾತೃ ಬಾಂಧವನಾದ ಈ ಪದ್ಯಭಾಗಕ್ಕೆ-

ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ । (೯-೧೭)

ಗೀತೆಯ ಈ ಶ್ಲೋಕ ಭಾಗವನ್ನು ಹಾಗೂ ಜಿತಂತೇ ಸ್ತೋತ್ರದ-

ಪಿತಾಮಾತಾ ಸುಹೃದ್ಬಂಧುಃ ಭ್ರಾತಾಪುತ್ರಸ್ತ್ವಮೇವ ಮೇ ।
ತ್ವಂಚಸ್ವಾಮೀ ಗುರುರ್ಮಾತಾ ಪಿತಾ ಚ ಮಮಬಾಂಧವಃ ॥

ಇತ್ಯಾದಿ ಶ್ಲೋಕಗಳನ್ನು ಉದಾಹರಿಸಿರುವುದು ಸೂಕ್ತವಾಗಿದೆ.

ನಂಬದಿರು ಈ ದೇಹ ನಿತ್ಯವಲ್ಲ- ಈ ಪದ್ಯದಲ್ಲಿ (ಪುಟ ೧೧)

ಎಲುಬು ರಕ್ತ ಮಾಂಸಗಳ ಮೇಲೆ ಚರ್ಮದ ಹೊದಿಕೆ-
ಒಳಗೆ ಮಲಮೂತ್ರಾದಿ ಕ್ರಿಮಿರಾಶಿ ಇಹವು ।
ಹಲವು ವ್ಯಾಧಿಯ ಬೀಡು ಪಂಚಭೂತದ ನಾಡು
ಬಲುಹು ದೇಹವ ನೆಚ್ಚಿ ಕೆಡಬೇಡ ಮನವೇ ॥

ಈ ಪದ್ಯವನ್ನು ಸಮರ್ಥನೆ ಮಾಡುತ್ತ- ಶ್ರೀಮದ್ ಭಾಗವತ ಮಹಾತ್ಮ್ಯದ ಈ ಶ್ಲೋಕವನ್ನು ಕೊಟ್ಟಿರುವದು ಗಮನಾರ್ಹವಾಗಿದೆ.

ಅಸ್ಥಿಸ್ತಂಭಂ ಸ್ನಾಯುಬದ್ಧಂ ಮಾಂಸ ಶೋಣಿತ ಲೇಪಿತಮ್ ।
ಚರ್ಮಾವನದ್ಧಂ ದುರ್ಗಂಧಂ ಪಾತ್ರಂ ಮೂತ್ರ ಪುರೀಷಯೋಃ ॥

ಜರಾಶೋಕ ವಿಪಾಕಾರ್ತಂ ರೋಗಮಂದಿರ ಮಾತುರಂ ।
ದುಷ್ಪೂರಂ ದುರ್ಧರಂ ದುಷ್ಟಂ ಸದೋಷಂ ಕ್ಷಣ ಭಂಗುರಮ್ ॥

ಮತ್ತು "ಪಂಚಭೂತದ ನಾಡು" ಈ ದೇಹ ಎಂಬುದಕ್ಕೆ ತೋರಿಸಿದ ಶ್ರೀಮನ್ ಮಹಾಭಾರತದ ಶಾಂತಿ ಪರ್ವದ ಶ್ಲೋಕವು ಚೆನ್ನಾಗಿ ಮೂಡಿಬಂದಿದೆ. (ಪುಟ ೧೨)

ಚೇಷ್ಟಾ ವಾಯುಃ ಖಮಾಕಾಶಮೂಷ್ಮಾಗ್ನಿಃ ಸಲಿಲಂ ದ್ರವಃ ।
ಪೃಥಿವೀ ಚಾತ್ರ ಸಂಘಾತಃ ಶರೀರಂ ಪಾಂಚಭೌತಿಕಮ್ ॥

ಹೀಗೆ ಉಳಿದ ಪದ್ಯಗಳಲ್ಲಿ ಕೂಡ ಸಮಾಖ್ಯಾ ಶ್ಲೋಕಗಳನ್ನು ನಾವು ಕಾಣಬಹುದು.

ಇನ್ನು ಅನುಬಂಧ ಒಂದರಲ್ಲಿ ದಾಸ ಸಾಹಿತ್ಯದಲ್ಲಿ ಭಗವಂತನ ದಶಾವತಾರ ಇವೇ ಮೊದಲಾದ ೩-೪ ಲೇಖನಗಳು ಮೂಡಿಬಂದಿವೆ ಮತ್ತು ಅನುಬಂಧ ಎರಡ ರಲ್ಲಿ ಶ್ರೀ ದಾಸರ ಸುಭಾಷಿತಗಳನ್ನು ಸಂಗ್ರಹಿಸಲಾಗಿದೆ. ನಂತರ ಅನುಬಂಧ ಮೂರರಲ್ಲಿ "ಫಲವಿದು ಬಾಳ್ದುದಕೆ" ಈ ಪದ್ಯಕ್ಕೆ ಪ್ರಾಚೀನರು ಬರೆದಿಟ್ಟ ಸಮಾಖ್ಯಾ ಶ್ಲೋಕಗಳ ಸಂಗ್ರಹವನ್ನೂ ಕೊಟ್ಟಿರುವದು ಈ ಪುಸ್ತಕಕ್ಕೆ ಹೆಚ್ಚಿನ ಮಹತ್ವವನ್ನೂ, ಮೆರುಗನ್ನೂ ತಂದಿದೆ.

ಒಟ್ಟಿನಲ್ಲಿ ದಾಸ ಸಾಹಿತ್ಯದ ಅಧ್ಯಯನ ಮಾಡುವ ಸಜ್ಜನರಿಗೆ ಈ ಪುಸ್ತಕವು ಉಪಯುಕ್ತವೆನಿಸುವದರಲ್ಲಿ ಸಂದೇಹವಿಲ್ಲ. ಇವನ ಲೇಖನಿಯಿಂದ ಇನ್ನೂ ಅನೇಕ ಗ್ರಂಥಗಳು ಹೊರಬರಲಿ ಎಂದು ಹಾರೈಸಿ ಈ ವಿದ್ಯಾರ್ಥಿಗೆ ಶ್ರೀಹರಿವಾಯು ಗುರುಗಳು ಜ್ಞಾನ ಭಕ್ತಿ ವೈರಾಗ್ಯಾದಿಗಳನ್ನು ಕೊಡಲಿ ಎಂದು ಆಶಿಸುತ್ತೇವೆ.

ತಾ॥ ೬-೬-೧೯೯೩ | ಇತಿ
ಧಾರವಾಡ | ಕೃ. ಗೋ. ಕಲಕೋಟಿ

॥ ಶ್ರೀಃ ॥

# ನನ್ನ ಮಾತು

ಆ ಭಗವಂತನ ಪ್ರೇರಣೆಗೆ ಅನುಸಾರವಾಗಿ ಪ್ರಸ್ತುತ ಕೃತಿ "ದಾಸ ಸಾಹಿತ್ಯ ಸೌರಭ"ದಲ್ಲಿ ಶ್ರೀಹರಿದಾಸರ ಕೆಲವು ಪದ್ಯಗಳಿಗೆ ವಿವರಣೆಯನ್ನು ನೀಡುವ ಪ್ರಯತ್ನ ಮಾಡಿದ್ದೇನೆ.

ಅನುಬಂಧ ಒಂದರಲ್ಲಿ ಭಗವಂತನ ದಶಾವತಾರ, ಶ್ರೀ ಹನುಮ ಭೀಮ ಮಧ್ವರು, ಶ್ರೀಮನ್ಮಧ್ವಮತ ಇತ್ಯಾದಿಗಳು ದಾಸ ಸಾಹಿತ್ಯದಲ್ಲಿ ಹೇಗೆ ಮೂಡಿ ಬಂದಿವೆಯೆಂಬುದನ್ನು ನೋಡಬಹುದು.

ಅನುಬಂಧ ಎರಡರಲ್ಲಿ ಶ್ರೀಹರಿದಾಸರ ಕೆಲವು ಸುಭಾಷಿತಗಳನ್ನು ಸಂಗ್ರಹಿಸಿ ಕೊಟ್ಟಿದ್ದೇನೆ.

ಅನುಬಂಧ ಮೂರರಲ್ಲಿ ಶ್ರೀ ಜಗನ್ನಾಥದಾಸರ "ಫಲವಿದು ಬಾಳ್ದುದಕೆ" ಪದ್ಯಕ್ಕೆ ಸಮಾಖ್ಯಾ ಶ್ಲೋಕಗಳ ಸಂಗ್ರಹವೊಂದನ್ನು ಕೊಡಲಾಗಿದೆ.

ಈ ಗ್ರಂಥವನ್ನು ನಮ್ಮ ಕುಲಸ್ವಾಮಿಯಾದ ಶ್ರೀ ಶ್ರೀನಿವಾಸದೇವರ ಪಾದ ಕಮಲಗಳಲ್ಲಿ ಭಕ್ತಿಪೂರ್ವಕ ಸಮರ್ಪಿಸಿದ್ದೇನೆ.

ಗ್ರಂಥ ಸಂಪಾದನ ಕಾರ್ಯದಲ್ಲಿ ನನಗೆ ಮಾರ್ಗದರ್ಶನ ಮಾಡಿ, ಸೂಕ್ತ ಸಲಹೆಗಳನ್ನು ನೀಡಿದ ನನ್ನ ವಿದ್ಯಾಗುರುಗಳಾದ ಶ್ರೀ ಮ. ಶಾ. ಸಂ. ತ್ರಿವಿಕ್ರಮಾಚಾರ್ಯ ಉಮರ್ಜಿ ಅವರಿಗೆ ನನ್ನ ಕೃತಜ್ಞತಾಪೂರ್ವಕ ನಮಸ್ಕಾರಗಳನ್ನು ಸಲ್ಲಿಸುತ್ತೇನೆ.

ಪ್ರಸ್ತುತ ಗ್ರಂಥಕ್ಕೆ ಅನುಗ್ರಹಪತ್ರವೊಂದನ್ನು ಬರೆದುಕೊಡಬೇಕೆಂದು ಶ್ರೀ ಶ್ರೀ ೧೦೦೮ ಶ್ರೀಮತ್‌ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರನ್ನು ವಿಜ್ಞಾಪಿಸಿಕೊಂಡಾಗ ಅವರು ಸಂತೋಷದಿಂದ ಒಪ್ಪಿ ಅನುಗ್ರಹಿಸಿದುದನ್ನು ನಾನೆಂದಿಗೂ ಮರೆಯಲಾರೆ. ಅವರಿಗೆ ನಾನು ಚಿರಋಣಿಯಾಗಿದ್ದೇನೆ. ಅವರ ಪಾದಕಮಲಗಳಲ್ಲಿ ನನ್ನ ಅನಂತ ದಂಡವತ್ ಪ್ರಣಾಮಗಳನ್ನು ಅರ್ಪಿಸುತ್ತ ತುಂಬು ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಪ್ರಸ್ತುತ ಗ್ರಂಥವು ಹೊರಬರಲು ಧನ ಸಹಾಯ ನೀಡಿದ, ಸ್ಫೂರ್ತಿನೀಡಿದ ದಾಸಸಾಹಿತ್ಯ ಪ್ರೊಜೆಕ್ಟಿನ ಸ್ಪೆಶಲ್ ಆಫೀಸರರಾದ ಶ್ರೀ ಕೆ. ಅಪ್ಪಣ್ಣಾಚಾರ್ಯರಿಗೂ ಸಂಪಾದಕರಾದ ಶ್ರೀ ಕೆ. ಸುಬ್ಬಾರಾವ್ ಅವರಿಗೂ, ಹಾಗೂ ತಿರುಮಲೆ ತಿರುಪತಿ ದೇವಸ್ಥಾನದ ಸಿಬ್ಬಂದಿವರ್ಗದವರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಗ್ರಂಥದ ಅನುಬಂಧ ಮೂರರಲ್ಲಿ ಕೊಟ್ಟಿರುವ "ಫಲವಿದು ಬಾಳ್ದುದಕೆ" ಪದ್ಯದ ಸಮಾಖ್ಯಾ ಶ್ಲೋಕಗಳ ಸಂಗ್ರಹವನ್ನು ನನಗೆ ಪ್ರಕಟಿಸಲು ಕೊಡಮಾಡಿದ ಶ್ರೀ ಪಂ॥ ಕೆ. ಜಿ. ಕಲಕೋಟಿಯವರಿಗೆ ನಾನು ಚಿರಋಣಿಯಾಗಿದ್ದೇನೆ.

ಹಿಂದಿನಂತೆ ಗ್ರಂಥ ಪ್ರಕಟನಾ ಕಾರ್ಯದಲ್ಲಿ ನೆರವಾದ ನನ್ನ ತಮ್ಮ ಚಿ॥ ವಾದಿರಾಜ ಮಠದ ಬಿ.ಕಾಂ. ಹಾಗೂ ನನ್ನ ಚಿಕ್ಕಮ್ಮನ ಮಗ ಚಿ॥ ಕೃಷ್ಣಮೂರ್ತಿ ಅರ್ಚಕ ಎಂ.ಎ., ಪಿಎಚ್.ಡಿ. ಇವರಿಗೆ ತಿರುಪತಿ ತಿಮ್ಮಪ್ಪನು ಜ್ಞಾನ ಭಕ್ತಿ ವೈರಾಗ್ಯಾದಿಗಳನ್ನು ಕೊಡಲೆಂದು ಪ್ರಾರ್ಥಿಸುವೆ.

ಸಕಾಲದಲ್ಲಿ ಈ ಗ್ರಂಥವನ್ನು ಅಂದವಾಗಿ ಮುದ್ರಣ ಮಾಡಿಕೊಟ್ಟ ಮನೋಹರ ಮುದ್ರಣಾಲಯ, ಧಾರವಾಡ ಇವರಿಗೂ ನನ್ನ ಕೃತಜ್ಞತೆಗಳು.

ಈ ಗ್ರಂಥರಚನೆಯು ಶ್ರೀ ಹರಿಯ ಪಾದಕಮಲಗಳಲ್ಲಿ ಭಕ್ತಿಯು ಅಭಿವೃದ್ಧಿಯಾಗಲೆಂದು ಅಪೇಕ್ಷಿಸಿ ಮಾಡಿದುದಾಗಿದೆ.

ಇತಿ ಹರಿದಾಸರ ದಾಸ

**ಶ್ರೀನಿವಾಸ ಸು. ಮಠದ**

# ಅನುಕ್ರಮಣಿಕಾ

॥ ಶ್ರೀಃ ॥

# ಎನಗೊಬ್ಬ ದೊರೆಯು ದೊರಕಿದನು

ಶ್ರೀ ಪುರಂದರದಾಸರು

ಎನಗೊಬ್ಬ ದೊರೆಯು ದೊರಕಿದನು ॥ ಪ ॥

ವನಜಸಂಭವಜನಕ ಹನುಮನಂತರ್ಯಾಮಿ ॥ ಅ. ಪ. ॥

ಮಾತಾಪಿತನಾದ ಭ್ರಾತೃಬಾಂಧವನಾದ
ಪ್ರೀತಿಯಿಂದಲಿ ತಾನೇ ನಾಥನಾದ ।
ಖ್ಯಾತನು ತಾನಾದ ದಾತನು ತಾನಾದ
ಭೂತೇಶವಂದ್ಯ ವಿಭೂತಿ ಪ್ರಿಯನಾದ ॥ ೧ ॥

ಅಜರಾಮರಣನಾದ ಅಪ್ರಾಕೃತನಾದ
ವಿಜಯನೊಲಿದು ನಿಜಸೂತನಾದ
ಭುಜಗಶಯನನಾದ ತ್ರಿಜಗ ವಂದಿತನಾದ
ಅಜಮಿಳನ ಅಂತ್ಯಕತ್ಯಂತ ಸುಹೃದನಾದ ॥ ೨ ॥

ಶಂಖ ಚಕ್ರಾಂಕಿತದ ಸಂಕರುಷಣನಾದ ।
ಬಿಂಕದಿಂ ಬಿರುದುಗಳ ಪೊತ್ತವನಾದ ।
ಪಂಕಜನಯನ ಮೀನಾಂಕ ಜನಕನಾದ
ಓಂಕಾರಮೂರುತಿ ಪುರಂದರವಿಠಲನಾದ ॥ ೩ ॥

ಈ ಪದ್ಯದಲ್ಲಿ ಶ್ರೀ ಪುರಂದರದಾಸರು ಸಮಸ್ತವಾದ ಚರಾಚರ ಪ್ರಪಂಚಕ್ಕೆ ಶ್ರೀ ಹರಿಯೊಬ್ಬನೇ ದೊರೆ, ಅವನೇ ಬ್ರಹ್ಮಾದಿ ದೇವತೆಗಳಿಂದ ವಂದ್ಯನಾದವನು ಅಪ್ರಾಕೃತ ಸ್ವರೂಪಿ, ಓಂಕಾರ ಪ್ರತಿಪಾದ್ಯ ಎಂಬುದಾಗಿ ವರ್ಣಿಸಿದ್ದಾರೆ.

"ಎನಗೊಬ್ಬ ದೊರೆಯು ದೊರಕಿದನು."

ಇಲ್ಲಿ "ಏಕಮೇವಾದ್ವಿತೀಯಮ್ ಬ್ರಹ್ಮ"ಎಂಬ ಛಾಂದೋಗ್ಯ ಉಪನಿಷತ್ತಿನಲ್ಲಿ ಬರುವ ಹಾಗೂ "ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ" ಎಂಬ ಶ್ರೀಮನ್‌ಮಹಾಭಾರತದಲ್ಲಿ ಬರುವ ಶ್ಲೋಕದ ಸಾರವನ್ನು ಸಂಗ್ರಹಿಸಿದ್ದಾರೆ.

ಈ ಪ್ರಪಂಚದಲ್ಲಿ ಪರಮಾತ್ಮನು ಒಬ್ಬನೇ; ಅವನು ಸಮಾಧಿಕರಹಿತನು. ಅವನೇ ಎಲ್ಲರಿಗೂ (ಪ್ರಭು) ದೊರೆಯಾಗಿದ್ದಾನೆ. ಬೇರೊಬ್ಬನಿಲ್ಲ ಎನ್ನುತ್ತಾರೆ ಶ್ರೀದಾಸರು. ಮತ್ತು "ಏಕಃ ಪರಮ ಆಸೀತ್" ಎಂಬ ಕಾಷಾಯಣ ಶ್ರುತಿಯನ್ನು ಹಾಗೂ "ನಾರಾಯಣಃ ಪರತಮಃ ಪರಮಾತ್ಮ ಏಕಃ" ಎಂಬುದಾಗಿ ಶ್ರೀಮನ್‌ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಹೇಳಿರುವುದನ್ನು ಇಲ್ಲಿ ನೆನೆಸಿಕೊಳ್ಳಬಹುದು.

"ವನಜಸಂಭವಜನಕ ಹನುಮನಂತರ್ಯಾಮಿ"

ಇಲ್ಲಿ ಚತುರ್ಮುಖ ಬ್ರಹ್ಮನನ್ನು ಸೃಷ್ಟಿ ಮಾಡುವವನು ಪರಮಾತ್ಮನೇ ಆಗಿದ್ದಾನೆಂದು ತಿಳಿಸುತ್ತಾರೆ. ಶ್ರೀಮದ್‌ಭಗವದ್ಗೀತೆಯಲ್ಲಿ "ಬ್ರಹ್ಮಣೋಽಪ್ಯಾದಿ ಕರ್ತ್ರೇ" ಎಂಬ ಶ್ಲೋಕಭಾಗದಲ್ಲಿ ಬರುವ ಅರ್ಥವನ್ನೇ ದಾಸರು "ವನಜಸಂಭವ ಜನಕ" ಎಂಬುದಾಗಿ ತಿಳಿಸಿರುತ್ತಾರೆ.

ಇನ್ನು "ಹನುಮನಂತರ್ಯಾಮಿ" ಶ್ರೀಹರಿಯು ಆಗಿದ್ದಾನೆ. ಕಾರಣವೆಂದರೆ

ದೇಹೇಽಪಿ ಯತ್ರ ಪವನೋಽತ್ರ ಹರಿರ್ಯತೋಽಸೌ ।
ತತ್ರೈವ ವಾಯುರಿತಿ ವೇದವಚಃ ಪ್ರಸಿದ್ಧಂ ॥

ಶ್ರೀ ಮ. ಭಾ. ತಾ. ನಿ. (೫–೪೬)

ಶ್ರೀ ವಾಯುದೇವರ ಅಂತರ್ಯಾಮಿಯಾಗಿ ಶ್ರೀ ಹರಿಯು ಸರ್ವದಾ ನೆಲೆಸಿದ್ದಾನೆ. ಈ ವಾಯುದೇವರೇ ಶ್ರೀ ಹನುಮ, ಭೀಮ, ಮಧ್ವರೆಂಬ ಮೂರು ರೂಪಗಳಿಂದ ಶ್ರೀ ಹರಿಯ ಸೇವೆ ಮಾಡಿ ಪರಮ ಪ್ರೀತಿಪಾತ್ರರಾಗಿದ್ದಾರೆ. ನಾವು ನಮ್ಮ ಸಕಲ ಕರ್ಮಗಳನ್ನು ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತನಾದ ಶ್ರೀಹರಿಗೆ ಸಮರ್ಪಿಸಬೇಕಾದುದು ಅತೀ ಅವಶ್ಯವಾಗಿದೆ. "ತಸ್ಮಿನ್ನಪೋ ಮಾತರಿಶ್ವಾ ದಧಾತಿ" ಎಂಬ ಈಶೋಪನಿಷತ್ತಿನ ವಾಕ್ಯದಂತೆ ಮುಖ್ಯಪ್ರಾಣರೇ ಈ ಕೆಲಸವನ್ನು ಜಾಗ್ರತೆಯಾಗಿ ನಿರ್ವಹಿಸಿ ಪರಮಾತ್ಮನಿಗೆ ಮುಟ್ಟಿಸತಕ್ಕವರು. ಇವರ ಅಧಿಷ್ಠಾನದಲ್ಲಿ ಸಮರ್ಪಿಸಿದರೆ ಮಾತ್ರ ಶ್ರೀಹರಿಗೆ ಮುಟ್ಟುವದು ನಿಶ್ಚಿತ ಎಂಬುದು ಒಟ್ಟು ತಾತ್ಪರ್ಯವಾಗಿದೆ. ಇಂಥ ಅವತಾರತ್ರಯ ವಿಶಿಷ್ಟರಾದ ವಾಯುದೇವರಲ್ಲಿ ಶ್ರೀಹರಿಯು ಸರ್ವದಾ ನೆಲೆಸಿರುತ್ತಾನೆಂಬುದು ಶ್ರೀ ದಾಸಶ್ರೇಷ್ಠರ ಉಚಿತವಾದ ಅಭಿಪ್ರಾಯವಾಗಿದೆ.

ಮಾತಾಪಿತನಾದ ಭ್ರಾತೃಬಾಂಧವನಾದ
ಪ್ರೀತಿಯಿಂದಲಿ ತಾನೇ ನಾಥನಾದ ॥

ಈ ಪದ್ಯಭಾಗದಲ್ಲಿ, ಶ್ರೀಭಗವದ್ಗೀತೆಯಲ್ಲಿ ಬರುವ ಕೆಳಗಿನ ಶ್ಲೋಕದ ಭಾವವು ಅಡಗಿರುತ್ತದೆ.

ಪಿತಾಽಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ । (೯–೧೭)
ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ॥ (೯–೧೮)

ಪರಮಾತ್ಮನೇ ಸಮಸ್ತ ಜಗತ್ತಿಗೆ ತಂದೆಯು ಪೋಷಕನು ಆಗಿದ್ದಾನೆ. ಸರ್ವರಿಗೂ (ಮೋಕ್ಷೇಚ್ಛುಗಳಿಗೆ) ಗತಿಪ್ರದನು. ಸ್ವಾಮಿಯು, ಸರ್ವಾಶ್ರಯನು, ಸರ್ವಾಧಾರನೂ ಆಗಿರುವನು. ಇಲ್ಲಿ ಸುಹೃತ್ ಎಂಬುದಕ್ಕೆ ಅನಿಮಿತ್ತೋಪಕಾರಿಯು ಹಾಗೂ ಪ್ರಭು ಎಂಬುದಕ್ಕೆ ನಾಥ=ಸ್ವಾಮಿಯು ಎಂಬುದು ಚೆನ್ನಾಗಿ ಮೂಡಿ ಬಂದಿದೆ.

ಶ್ರೀ ಪಂಚರಾತ್ರಾಗಮದ ಅಷ್ಟಾಕ್ಷರ ಕಲ್ಪದ ಶ್ರೀ ಜಿತಂತೇಸ್ತೋತ್ರದಲ್ಲಿ–

ಪಿತಾ ಮಾತಾ ಸುಹೃದ್‌ಬಂಧುಃ ಭ್ರಾತಾ ಪುತ್ರ ಸ್ತ್ವಮೇವ ಮೇ ।
ತ್ವಂ ಚ ಸ್ವಾಮೀ ಗುರುರ್ಮಾತಾ ಪಿತಾ ಚ ಮಮ ಬಾಂಧವಃ ॥

ಎಂಬುದಾಗಿ ಪರಮಾತ್ಮನನ್ನು ಕುರಿತು ಮಾಡಿದ ಸ್ತೋತ್ರವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಖ್ಯಾತನು ತಾನಾದ ದಾತನು ತಾನಾದ
ಭೂತೇಶವಂದ್ಯ ವಿಭೂತಿ ಪ್ರಿಯನಾದ ॥

ಪರಮಾತ್ಮನು ಸರ್ವೋತ್ತಮನೂ, ಪುರುಷೋತ್ತಮನು ಹಾಗೂ ಮುಕ್ತಿದಾತನು ಆಗಿದ್ದಾನೆ.

ಯಸ್ಮಾತ್ ಕ್ಷರಮತೀತೋಽಹಂ ಅಕ್ಷರಾದಪಿ ಚೋತ್ತಮಃ
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥
(ಗೀತಾ ೧೫-೧೮)

ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ ।
ಆನಂದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ದನಃ ॥
(ಶ್ರೀವಿಷ್ಣುತತ್ತ್ವವಿನಿರ್ಣಯ)

ಈ ಮೇಲಿನ ಶ್ಲೋಕದ್ವಯದಿಂದ ಪರಮಾತ್ಮನು ಕ್ಷರಾಕ್ಷರಪುರುಷರಿಗಿಂತ ಉತ್ತಮನು ಅಂದರೆ ಪುರುಷೋತ್ತಮನು, ಅಜ್ಞಾನಿಗಳಿಗೆ ಜ್ಞಾನವನ್ನು, ಜ್ಞಾನಿಗಳಿಗೆ ಮೋಕ್ಷವನ್ನು ಮತ್ತು ಮುಕ್ತರಿಗೆ ಆನಂದವನ್ನು ಕೊಡುವವನು ಆಗಿರುತ್ತಾನೆ. ಹೀಗೆ ಪ್ರಸಿದ್ಧಿಯನ್ನು ಪಡೆದವನು ಶ್ರೀ ಹರಿಯು.

ಇದನ್ನೇ ದಾಸರು ಖ್ಯಾತನು ತಾನಾದ, ದಾತನು ತಾನಾದ ಎಂಬುದಾಗಿ ಬಣ್ಣಿಸಿ, "ಸ ಏವೈಕೋ ಜನಾರ್ದನಃ" ಎಂಬಂತೆ ಅವನು "ಒಬ್ಬನೇ" ಎಂದಾಗಿ ಹೇಳಿರುವುದು ಗಮನಾರ್ಹವಾಗಿದೆ.

ಇನ್ನು ಭೂತೇಶ ಎಂದರೆ ರುದ್ರದೇವರು. ಅವರಿಂದ ಪರಮಾತ್ಮನು ವಂದ್ಯನಾಗಿದ್ದಾನೆ ಹಾಗೂ ವಿಭೂತಿ ಪ್ರಿಯನು ಆಗಿದ್ದಾನೆ.

ಭೂತೇಶಃ ಖಂಡಪರಶುಃ ಗಿರಿಶೋ ಗಿರಿಶೋ ಮೃಡಃ (ಅಮರಕೋಶ)

ಎಂಬಂತೆ ರುದ್ರದೇವರಿಂದ ನಮಸ್ಕಾರ ಮಾಡಿಸಿಕೊಳ್ಳಲ್ಪಟ್ಟವನು ಶ್ರೀಹರಿಯು.

ಉಚ್ಯತೇ ಸರ್ವವೇದೋರುವಾದ್ಯೈರಜಃ ಸ್ವರ್ಚಿತೋ ಬ್ರಹ್ಮ-
ರುದ್ರೇಂದ್ರ ಪೂರ್ವೈಃ ಸದಾ (ದ್ವಾದಶ ಸ್ತೋತ್ರ)

ಶ್ರೀಮನ್ ಮಧ್ವಾಚಾರ್ಯರು ಈ ಶ್ಲೋಕದಲ್ಲಿ ಪರಮಾತ್ಮನು ಬ್ರಹ್ಮರುದ್ರಾದಿ ದೇವತೆಗಳಿಂದಲೂ ಪೂಜಿಸಲ್ಪಡುವವನು ಎಂದು ಹೇಳಿರುವದನ್ನು ಗಮನಿಸಬೇಕು.

ವಿಭೂತಿ ಎಂದರೆ ವಿಶೇಷ ರೂಪಧಾರಣೆ. ಶ್ರೇಷ್ಠತ್ವ ಮತ್ತು ವಿವಿಧ ಅಧಿಷ್ಠಾನಗಳಲ್ಲಿ ಇರುವಿಕೆ ಎಂದು ಅರ್ಥವಾಗುತ್ತದೆ. ಈ ವಿಭೂತಿರೂಪಗಳ ವಿವರಣೆಯು ಶ್ರೀಮದ್‌ಭಗವದ್ಗೀತೆಯ ಹತ್ತನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ.

ಶ್ರೀಮದಾಚಾರ್ಯರು ತಮ್ಮ ಗೀತಾ ತಾತ್ಪರ್ಯದಲ್ಲಿ "ವಿಭೂತಿತತ್ವ" ವೆಂಬ ಗ್ರಂಥದ ಆಧಾರಕೊಟ್ಟು ಈ ವಿಷಯವನ್ನು ತಿಳಿಸಿಕೊಟ್ಟಿದ್ದಾರೆ.

ಯದ್ಯದ್ವಿಭೂತಿ ಮತ್ಸತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವ ಗಚ್ಛತ್ವಂ ಮಮ ತೇಜೋಂಶ ಸಂಭವಮ್ ॥ (ಗೀತಾ ೧೦-೪೧)

ಪರಮಾತ್ಮನ ವಿಶಿಷ್ಟ ಸನ್ನಿಧಾನದಿಂದ ಯುಕ್ತವಾದ ವಸ್ತುವು ಆಯಾ ಸಮಾನ ಜಾತೀಯ ವಸ್ತುಗಳಲ್ಲಿ ಶ್ರೇಷ್ಠತ್ವವನ್ನು ಹೊಂದಿ "ವಿಭೂತಿರೂಪ" ವೆನಿಸಿಕೊಳ್ಳುತ್ತದೆ. ಇಂಥ ರೂಪಗಳು ಪರಮಾತ್ಮನಿಗೆ ಪ್ರಿಯವಾದವುಗಳೆಂದು ಶ್ರೀ ದಾಸರು ಹೇಳುತ್ತಾರೆ.

ಅಜರಾಮರಣನಾದ ಅಪ್ರಾಕೃತನಾದ
ವಿಜಯನೊಲಿದು ನಿಜ ಸೂತನಾದ ॥

ಪರಮಾತ್ಮನು ಮುಪ್ಪು ಸಾವುಗಳಿಲ್ಲದವನು ಮತ್ತು ಅಪ್ರಾಕೃತನು ಅಂದರೆ- ಪ್ರಾಕೃತ ದೇಹವಿಲ್ಲದವನು. ಜ್ಞಾನಾನಂದಾದಿ ದೇಹವುಳ್ಳವನು ಆಗಿದ್ದಾನೆ.

ಶ್ರೀಮದಾಚಾರ್ಯರು ಪರಮಾತ್ಮನನ್ನು "ಅಜರಾಮರಣಃ ಸಕಲಾರ್ತಿಹರಃ" ಎಂಬುದಾಗಿ ಶ್ರೀ ದ್ವಾದಶ ಸ್ತೋತ್ರದಲ್ಲಿ ಬಣ್ಣಿಸಿದ್ದಾರೆ.

ಶ್ರೀ ಜಿತಂತೇ ಸ್ತೋತ್ರದಲ್ಲಿ ಬ್ರಹ್ಮದೇವರು ಹೀಗೆ ವರ್ಣಿಸುತ್ತಾರೆ—

"ಅಪ್ರಾಕೃತ ಸುರೈರ್ವಂದ್ಯಂ ಅಯುತಾರ್ಕ ಸಮಪ್ರಭಮ್"

ನಂತರ ಶ್ರೀ ಹರಿಯು ವಿಜಯನಿಗೆ ಅಂದರೆ ಅರ್ಜುನನಿಗೆ ಒಲಿದು ಸಾರಥ್ಯವನ್ನು ಮಾಡಿದ ವಿಷಯವನ್ನು ನಿರೂಪಿಸುತ್ತಾರೆ.

ಅರ್ಜುನಃ ಫಲ್ಗುನಃ ಪಾರ್ಥಃ ಕಿರೀಟೀ ಶ್ವೇತವಾಹನಃ ।
ಭೀಭತ್ಸುಃ ವಿಜಯೋ ಜಿಷ್ಣುಃ ಸವ್ಯಸಾಚೀ ಧನಂಜಯಃ ॥

ಹಾಗೂ ನಾಜಿತ್ವಾ ವಿನಿವರ್ತಾಮಿ ತೇನ ಮಾಂ ವಿಜಯಂ ವಿದುಃ॥ ವಿರಾಟಪರ್ವ (೪೪-೯) ಎಂಬಂತೆ ಅರ್ಜುನನಿಗೆ "ವಿಜಯ" ನೆಂಬ ಹೆಸರಿದೆ. ಸೂತ ಎಂದರೆ ಸಾರಥಿ. ಅರ್ಜುನನು ಶ್ರೀಕೃಷ್ಣನಿಗೆ "ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ"॥ ಎಂದಾಗಿ ಸಂಬೋಧಿಸಿರುವದನ್ನು ಗಮನಿಸಿದರೆ ಶ್ರೀಕೃಷ್ಣನು ಅರ್ಜುನನಿಗೆ ಸಾರಥಿಯಾಗಿದ್ದನೆಂಬ ವಿಷಯ ಖಚಿತವಾಗುತ್ತದೆ.

ಭುಜಗ ಶಯನನಾದ ತ್ರಿಜಗ ವಂದಿತನಾದ ।
ಅಜಮಿಳನ ಅಂತ್ಯಕತ್ಯಂತ ಸುಹೃದನಾದ ॥

ಭುಜಗ ಎಂದರೆ ಸರ್ಪ. ಪರಮಾತ್ಮನು ಶೇಷ (ಸರ್ಪ) ಶಾಯಿಯಾಗಿದ್ದಾನೆ ಮತ್ತು ಮೂರು ಲೋಕಗಳಿಂದ ವಂದ್ಯನಾಗಿದ್ದಾನೆ.

ಶೇಷಸ್ತಯೋರೇವ ಹಿ ಜೀವನಾಮಾ ಕಾಲ್ಯಾತ್ಮಕಃ ಸೋಽಥ ಸುಪರ್ಣ ಆಸೀತ್।
ತೌವಾಹನಂ ಶಯನಂ ಚೈವ ವಿಷ್ಣೋಃ ಕಾಲಾ ಜಯಾದ್ಯಾಶ್ಚ ತತಃ
ಪ್ರಸೂತಾಃ ॥ (ಶ್ರೀ ಮ. ಭಾ. ತಾ. ನಿರ್ಣಯ)

ಇಲ್ಲಿ ತಿಳಿಸಿದಂತೆ ಶ್ರೀ ಹರಿಯು ಶೇಷಶಾಯಿಯಾಗಿದ್ದಾನೆಂಬುದು ನಿಶ್ಚಿತವು.

ಅಜಾಮಿಳನು ಮಹಾ ಭಗವದ್ಭಕ್ತನಾಗಿದ್ದ. ಅನೇಕ ಪಾಪಕೃತ್ಯಗಳನ್ನೆಸಗಿ ಅಂತ್ಯಕಾಲದಲ್ಲಿ ಅರ್ಥಾನು-ಸಂಧಾನಪೂರ್ವಕ ಪರಮಾತ್ಮನ ಸ್ಮರಣೆಯಿಂದ "ನಾರಾಯಣ"ನೆಂಬ ನಾಮವುಳ್ಳ ಮಗನನ್ನು ಕರೆದ. ಆಗ ವಿಷ್ಣುದೂತರು ಬಂದು ಇವನನ್ನು ಯಮಪಾಶದಿಂದ ಮುಕ್ತನನ್ನಾಗಿ ಮಾಡಿದರು. ಸಾಧನ ಪೂರ್ತಿಯಾದ ನಂತರ ಅಜಾಮಿಳನು ಹರಿಪದವನ್ನು ಸೇರಿದ.

ಶ್ರೀ ವಿಷ್ಣುಸಹಸ್ರನಾಮ ಸ್ತೋತ್ರದಲ್ಲಿ ಶ್ರೀ ಹರಿಯನ್ನು—

"ನಿವಾಸಃ ಶರಣಂ ಸುಹೃತ್" ಎಂದಾಗಿ ವರ್ಣಿಸಿರುವುದನ್ನು ಇಲ್ಲಿ ಸ್ಮರಿಸಿ ಕೊಳ್ಳಬೇಕು.

ಅಜಾಮಿಳನು ಮುಕ್ತಿ ಪಡೆದ ವಿಷಯ ಶ್ರೀಮದ್‌ಭಾಗವತದಲ್ಲಿ ನಿರೂಪಿತ ವಾಗಿದೆ.

ವಿಕ್ರುಶ್ಯ ಪುತ್ರಮಘವಾನ್ಯದಜಾಮಿಳೋಽಪಿ ।
ನಾರಾಯಣೇತಿ ಮ್ರಿಯಮಾಣ ಇಯಾಯ ಮುಕ್ತಿಂ ॥

ಶ್ರೀಹರಿಯು ಅತ್ಯಂತ ಕರುಣಾಶಾಲಿಯು. ಅಜಾಮಿಳನು ನಾರಾಯಣಸ್ಮರಣೆ ಯಿಂದ ಸಂತುಷ್ಟನಾದ ಶ್ರೀಹರಿ ಅವನಿಗೆ ಕ್ರಮೇಣ ಮುಕ್ತಿಯನ್ನು ದಯಪಾಲಿ ಸಿದನು.

ಶಂಖಚಕ್ರಾಂಕಿತದ ಸಂಕರುಷಣನಾದ । ಬಿಂಕದಿಂ ಬಿರುದುಗಳ ಪೊತ್ತವನಾದ.

ಪರಮಾತ್ಮನು ಶಂಖಚಕ್ರಾದಿಗಳನ್ನು ಧರಿಸಿದ್ದಾನೆ. ಪ್ರಲಯಕಾಲದಲ್ಲಿ ಎಲ್ಲ ಜಗ ತ್ತನ್ನು ಕರ್ಷಣಮಾಡಿ ತನ್ನ ಉದರದಲ್ಲಿ ಇಟ್ಟುಕೊಳ್ಳುವ ಕಾರಣದಿಂದ "ಸಂಕರು ಷಣ" ನೆನಿಸಿದ್ದಾನೆ.

ಶ್ರೀ ದ್ವಾದಶ ಸ್ತೋತ್ರದಲ್ಲಿ ಪರಮಾತ್ಮನನ್ನು—

ಶಂಖಚಕ್ರಗದಾಪದ್ಮಧರಾಶ್ಚಿಂತ್ಯಾ ಹರೇರ್ಭುಜಾಃ ॥ ಎಂಬುದಾಗಿ ಸ್ತೋತ್ರ ಮಾಡಿ ದ್ದಾರೆ. ಶ್ರೀ ವಿಷ್ಣುಸಹಸ್ರನಾಮ ಸ್ತೋತ್ರದಲ್ಲಿ ಪರಮಾತ್ಮನನ್ನು—

"ದೃಢಃ ಸಂಕರ್ಷಣೋಽಚ್ಯುತಃ ಎಂದು ಸ್ತುತಿಸಿರುವದನ್ನು ಮತ್ತು
ಶ್ರೀಮದಾಚಾರ್ಯರು ಶ್ರೀಮ. ಭಾ. ತಾ. ನಿರ್ಣಯದಲ್ಲಿ—

ಸಂಕರ್ಷಣಃ ಸ ಚ ಬಭೂವ ಸುನಿತ್ಯಃ ಎಂಬುದಾಗಿ ಸ್ತುತಿಸಿರುವದನ್ನು ಇಲ್ಲಿ ನೆನಪಿಸಿಕೊಳ್ಳಬೇಕು.

ಪರಮಾತ್ಮನು ತನ್ನ ಭಕ್ತವರ್ಗವನ್ನು ಸರ್ವದಾ ರಕ್ಷಿಸುತ್ತಾ ಅಕ್ರೂರವರದ, ಅಂಬರೀಷವರದ, ಪ್ರಹ್ಲಾದವರದ, ಧ್ರುವವರದ, ಗಜೇಂದ್ರವರದ ಇತ್ಯಾದಿಯಾಗಿ ಬಿರುದುಗಳನ್ನು ಧರಿಸಿರುವದು ಸರ್ವವಿದಿತ ಸಂಗತಿಯಾಗಿದೆ.

ಅಲ್ಲದೇ ನಾರಾಯಣಂ ಸುರಗುರುಂ, ಜಗದೇಕನಾಥಂ, ಭಕ್ತಪ್ರಿಯಂ...

ಇತ್ಯಾದಿ ಸ್ತೋತ್ರಗಳಿಂದ ಪರಮಾತ್ಮನು ಅನೇಕ ಬಿರುದುಳ್ಳವನೆಂದು ತಿಳಿದು ಬರುತ್ತದೆ.

ಪಂಕಜನಯನ ಮೀನಾಂಕ ಜನಕನಾದ ।
ಓಂಕಾರ ಮೂರುತಿ ಪುರಂದರ ವಿಠಲ ॥

ಪರಮಾತ್ಮನು ಕಮಲನೇತ್ರವುಳ್ಳವನು. ಕಾಮನನ್ನು ಪುತ್ರನನ್ನಾಗಿ ಪಡೆದವನಾಗಿದ್ದಾನೆ. ಮತ್ತು ಓಂಕಾರ ಪ್ರತಿಪಾದ್ಯನು ಇವನಾಗಿದ್ದಾನೆಂದು ಇಲ್ಲಿ ವರ್ಣಿಸಿದ್ದಾರೆ.

"ಪದ್ಮನಾಭೋ ಅರವಿಂದಾಕ್ಷಃ" ಎಂದಾಗಿ ಶ್ರೀ ವಿಷ್ಣುಸಹಸ್ರನಾಮದಲ್ಲಿ ತಿಳಿಸಿದಂತೆ ಶ್ರೀ ಹರಿಯು ಪಂಕಜನಯನನಾಗಿದ್ದಾನೆ. ಕಾಮನೇ ಮುಂದೆ ಪ್ರದ್ಯುಮ್ನನೆಂಬ ಹೆಸರಿಂದ ಶ್ರೀ ರುಕ್ಮಿಣೀದೇವಿಯಲ್ಲಿ ಜನ್ಮಪಡೆದಿದ್ದಾನೆ. ಕಾರಣ ಪರಮಾತ್ಮನು ಮೀನಾಂಕ ಜನಕನಾಗಿದ್ದಾನೆಂಬುದು ಸರಿಯೇ.

ಇನ್ನು ಓಂಕಾರದಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆ.

ಅಕಾರೇಣ ಜಗತ್ರಾತಾ ಸಂಹರ್ತಾ ಸ್ಯಾದುಕಾರತಃ ।
ಮಕಾರೇಣ ಜಗತ್‌ಸ್ರಷ್ಟಾ ಪ್ರಣವಾರ್ಥ ಉದಾಹೃತಃ ॥

ಓಂಕಾರವು ಅ, ಉ, ಮ, ಕಾರಗಳಿಂದ ಕೂಡಿದೆ. ಪರಮಾತ್ಮನು ಮೂರು ರೂಪಗಳಿಂದ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುತ್ತಾನೆ.

ಪರಮಾತ್ಮನು ಗುಣಪೂರ್ಣನಾದುದರಿಂದ ಅವನಿಗೆ "ಓಂ" ಎಂದು ಹೆಸರು ಬಂದಿದೆ.

ಇಂಥ ಓಂಕಾರ ಪ್ರತಿಪಾದ್ಯನಾದ ಪುರಂದರ ವಿಠಲನು ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾಗಿ ಅದ್ವಿತೀಯನಾಗಿದ್ದಾನೆ ಸರ್ವರಿಗೂ ಪ್ರಭುವಾಗಿದ್ದಾನೆ. ಇದನ್ನೇ ದಾಸಶ್ರೇಷ್ಠ ಶ್ರೀ ಪುರಂದರದಾಸರು "ಎನಗೊಬ್ಬ ದೊರೆಯು ದೊರಕಿದನು" ಈ ಪದ್ಯದಿಂದ ತಿಳಿಸಿ ನಮಗೆಲ್ಲ ಮಹೋಪಕಾರ ಮಾಡಿದ್ದಾರೆ.

ಶ್ರೀ ಮಧ್ವೇಶಾರ್ಪಣಮಸ್ತು

॥ ಶ್ರೀಃ ॥

# ನಂಬದಿರು ಈ ದೇಹ ನಿತ್ಯವಲ್ಲ

ಶ್ರೀ ಪುರಂದರದಾಸರು

ನಂಬದಿರು ಈ ದೇಹ ನಿತ್ಯವಲ್ಲ ।
ಅಂಬುಜಾಕ್ಷನ ಭಜಿಸಿ ಸುಖಿಯಾಗು ಮನವೇ ॥ ॥ ಪ ॥

ಎಲುಬು ರಕ್ತಮಾಂಸಗಳ ಮೇಲೆ ಚರ್ಮದ ಹೊದಿಕೆ
ಒಳಗೆ ಮಲಮೂತ್ರಾದಿ ಕ್ರಿಮಿರಾಶಿ ಇಹವು ।
ಹಲವು ವ್ಯಾಧಿಯ ಬೀಡು ಪಂಚಭೂತದ ನಾಡು
ಬಲುಹು ದೇಹವ ನೆಚ್ಚಿ ಕೆಡಬೇಡ ಮನವೇ ॥ ೧ ॥

ಸತಿಸುತರು ಹಿತರೆಂದು ಮತಿಮರೆತು ಮಮತೆಯಲಿ
ಅತಿಕಾಂಕ್ಷೆಯಿಂದ ದುರ್ವಿಷಯ ಒಲಿದು ।
ಸತತ ಲಕ್ಷ್ಮೀಪತಿಯ ಶರಣೆನ್ನದಿಹ ಪರದ
ಗತಿಶೂನ್ಯನಾಗಿ ನೀ ಕೆಡಬೇಡ ಮನವೇ ॥ ೨ ॥

ಪರರ ನಿಂದಿಸದೇ ಪರವಧುಗಳನು ಬಯಸದೇ
ಗುರು ವಿಪ್ರಸೇವೆಯನು ಮಾಡು ಬಿಡದೇ ।
ಹರಿಸ್ತುತಿಯ ನೀ ಕೇಳು ಹರಿಕೀರ್ತನೆಯ ಪಾಡು
ಸಿರಿ ಪುರಂದರವಿಠಲನೊಲಿದು ಪಾಲಿಸುವ ॥ ೩ ॥

ಪ್ರಸ್ತುತ ಪದ್ಯದಲ್ಲಿ ಶ್ರೀ ಪುರಂದರದಾಸರು ಪಂಚಮಹಾಭೂತಗಳಿಂದ ಕೂಡಿದ ಮನುಷ್ಯ ದೇಹವು ಅನಿತ್ಯವಾಗಿದೆ. ಕಾರಣ ಈ ದೇಹವು ನಾಶವಾಗುವ ಮೊದಲು ಭಗವಂತನಲ್ಲಿ ಅನನ್ಯವಾದ ಭಕ್ತಿಯನ್ನು ಮಾಡಿ ಅವನ ಅನುಗ್ರಹ ಸಂಪಾದಿಸುವದು ಅತ್ಯವಶ್ಯವಾಗಿದೆಯೆಂದು ತಿಳಿಸುತ್ತಾರೆ.

ನಂಬದಿರು ಈ ದೇಹ ನಿತ್ಯವಲ್ಲ ।
ಅಂಬುಜಾಕ್ಷನ ಭಜಿಸಿ ಸುಖಿಯಾಗು ಮನವೇ ॥ ಪ ॥

ಮಾನವನ ದೇಹವು ನಶ್ವರವಾದುದು. ಶೀಘ್ರವಾಗಿ ಬಿದ್ದು ಹೋಗುವಂತಹದು. ಈ ದೇಹವು ಬಿದ್ದು ಹೋಗುವ ಮೊದಲೇ ಅಂಬುಜಾಕ್ಷನೆನಿಸಿದ ಶ್ರೀ ಭಗವಂತನನ್ನು ಭಜಿಸಿ ಸುಖಿಯಾಗಬೇಕು. ಮೋಕ್ಷ ಮಾರ್ಗವನ್ನು ಕಂಡುಕೊಳ್ಳಬೇಕು. ಹೀಗೆ ಮಾಡಿದರೆ ಮಾತ್ರ ಜೀವನಿಗೆ ಮಾನವದೇಹ ಬಂದುದಕ್ಕೆ ಸಾರ್ಥಕವೆಂದು ತಿಳಿಯಬೇಕು.

ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾ ಶರೀರಿಣಃ ॥ ಗೀತಾ (೨–೧೮)

ಈ ಗೀತಾಚಾರ್ಯನ ಉಕ್ತಿಯಂತೆ ಮನುಷ್ಯನ ದೇಹವು ನಾಶವುಳ್ಳದ್ದಾಗಿದೆ. ಇದನ್ನೇ ಸುಭಾಷಿತಕಾರರು ಹೀಗೆ ತಿಳಿಸುತ್ತಾರೆ—

ಅನಿತ್ಯಾನಿ ಶರೀರಾಣಿ ವಿಭವೋ ನೈವ ಶಾಶ್ವತಃ ।
ನಿತ್ಯಂ ಸನ್ನಿಹಿತೋ ಮೃತ್ಯುಃ ಕರ್ತವ್ಯೋ ಧರ್ಮಸಂಗ್ರಹಃ ॥

ಶ್ರೀಮನ್‌ಮಹಾಭಾರತದಲ್ಲಿ ಹೀಗೆ ತಿಳಿಸಿದ್ದಾರೆ—

ಕೋಹಿ ಜಾನಾತಿ ಕಸ್ಯಾದ್ಯ ಮೃತ್ಯುಕಾಲೋ ಭವಿಷ್ಯತಿ ।
ಯುವೈವ ಧರ್ಮಶೀಲಃ ಸ್ಯಾತ್ ಅನಿತ್ಯಂ ಖಲು ಜೀವಿತಮ್ ॥ ಶಾಂತಿಪರ್ವ

ಮನುಷ್ಯ ದೇಹವು ಯಾವಾಗ ಮೃತ್ಯುವಶವಾಗುವದೋ ತಿಳಿಯದು. ಆದ್ದರಿಂದ ಧರ್ಮವನ್ನು ಸಂಪಾದಿಸಿ ಭಗವಂತನ ಅನುಗ್ರಹವನ್ನು ಹೊಂದಬೇಕು.

ಶ್ರೀಮದ್‌ಭಾಗವತಕಾರರು ಹೀಗೆ ಹೇಳುತ್ತಾರೆ---

ಲಬ್ಧ್ವಾ ಸುದುರ್ಲಭಮಿದಂ ಬಹು ಸಂಭವಾಂತೇ
ಮಾನುಷ್ಯಮರ್ಥದಮನಿತ್ಯಮಪೀಹ ಧೀರಃ ।
ತೂರ್ಣಂ ಯತೇತ ನ ಪತೇದನು ಮೃತ್ಯುಯಾವ-
ನ್ನಿಃ ಶ್ರೇಯಸಾಯ ವಿಷಯಃ ಖಲು ಸರ್ವತಃ ಸ್ಯಾತ್ ॥ (೧೧–೯–೨೮)

ಬಹುಜನ್ಮಗಳ ಕೊನೆಯಲ್ಲಿ ಪುಣ್ಯವಶದಿಂದ ಬರುವ ಈ ಅನಿತ್ಯವಾದ ಪುರುಷಾರ್ಥ ಸಾಧನವಾದ ಮಾನುಷ ದೇಹವನ್ನು ಹೊಂದಿ ಬುದ್ಧಿವಂತನಾದ ಜೀವನು, ಬೆನ್ಹತ್ತಿ ಬರುವ, ಮೃತ್ಯುವು ನುಂಗಲಿರುವ, ಈ ದೇಹವು ಬಿದ್ದುಹೋಗುವ ಮೊದಲು ಪರಮಾತ್ಮನನ್ನು ಸೇವಿಸಿ ಆತ್ಮಾರ್ಥ ಪ್ರಸಾದವನ್ನು ಹೊಂದಿ ಮೋಕ್ಷಭಾಗಿಯಾಗಲು ಪ್ರಯತ್ನಿಸಬೇಕು.

ಈ ಮಾನುಷ ದೇಹವು ಶ್ರೇಷ್ಠವೂ ಹೌದು ಎಂಬುದನ್ನು ಸಕಾರಣವಾಗಿ ಸುಭಾಷಿತವೊಂದು ಚೆನ್ನಾಗಿ ತಿಳಿಸುತ್ತದೆ.

ತತ್ರಸರ್ವಭೂತಾನಾಂ ಮನುಷ್ಯ ಶರೀರಂ ಶ್ರೇಷ್ಠಂ ।
ಜ್ಞಾನಾಧಿಕ್ಯಾತ್ ಧರ್ಮಾಚರಣ ಕ್ಷಮತ್ವಾತ್ ಚತುರ್ವಿಧ
ಪುರುಷಾರ್ಥ ಸಾಧಕತ್ವಾಚ್ಚ ॥

ಬ್ರಹ್ಮಜ್ಞಾನವನ್ನು ಹೊಂದುವ ಸಾಮರ್ಥ್ಯವಿದ್ದುದರಿಂದ, ಸ್ವವರ್ಣಾಶ್ರಮ ಧರ್ಮಾಚರಣೆಯನ್ನು ಮಾಡಲು ಅವಕಾಶವಿರುವದರಿಂದ ಮತ್ತು ಮೋಕ್ಷಾದಿ ಪುರುಷಾರ್ಥಗಳ ಸಾಧಕವೆನಿಸಿದ್ದರಿಂದ ಎಲ್ಲ ಪ್ರಾಣಿಗಳ ಶರೀರಕ್ಕಿಂತಲೂ ಮನುಷ್ಯ ಶರೀರವು ಶ್ರೇಷ್ಠವೆನಿಸಿದೆ.

ಶ್ರೀ ಗರುಡ ಪುರಾಣದಲ್ಲಿ ಈ ವಿಷಯವನ್ನು ಹೀಗೆ ನಿರೂಪಿಸಿದ್ದಾರೆ.

ಅತ್ರ ಜನ್ಮ ಸಹಸ್ರಾಣಾಂ ಸಹಸ್ರೈರಪಿಕೋಟಿಭಿಃ
ಕದಾಚಿಲ್ಲಭತೇ ಜಂತುಃ ಮಾನುಷ್ಯಂ ಪುಣ್ಯಸಂಚಯಾತ್ ।
ಸೋಪಾನ ಭೂತಂ ಮೋಕ್ಷಸ್ಯ ಮಾನುಷ್ಯಂ ಪ್ರಾಪ್ಯದುರ್ಲಭವ್ ।
ಯಸ್ತಾರಯತಿ ನಾತ್ಮಾನಂ ತಸ್ಮಾತ್ ಪಾಪತರೋಽತ್ರಕಃ ?॥

ನಾನಾವಿಧ ಶರೀರಗಳನ್ನು ಪಡೆದು ಅನೇಕ ಬಾರಿ ಹುಟ್ಟಿ ನಾನಾ ವಿಧ ಯಾತನೆಗಳನ್ನು ಅನುಭವಿಸಿದ ಬಳಿಕ ಯಾವುದೋ ಪುಣ್ಯವಿಶೇಷದಿಂದ ಜೀವನಿಗೆ ಮನುಷ್ಯ ಜನ್ಮ ಲಭಿಸುತ್ತದೆ. ಮನುಷ್ಯ-ಜನ್ಮವು ಮೋಕ್ಷದ ಮೆಟ್ಟಲು. ಇಂಥ ದುರ್ಲಭವಾದ ಜನ್ಮ ಹೊಂದಿ ಯಾರು ತನ್ನನ್ನು ಈ ಸಂಸಾರದಿಂದ ಪಾರು ಮಾಡಿಕೊಳ್ಳುವದಿಲ್ಲವೋ ಅವನಿಗಿಂತ ಮೂರ್ಖನು ಯಾವನಿದ್ದಾನೆ ?

ಶ್ರೀ ಪುರಂದರದಾಸರು ಇಲ್ಲಿ ಪರಮಾತ್ಮನನ್ನು 'ಅಂಬುಜಾಕ್ಷ' ನೆಂದು ಕರೆದಿದ್ದಾರೆ—

ಶ್ರೀ ಜಿತಂತೇ ಸ್ತೋತ್ರದಲ್ಲಿ ಬ್ರಹ್ಮದೇವರು ಭಗವಂತನನ್ನು ಈ ಹೆಸರಿನಿಂದಲೇ ಸ್ತೋತ್ರ ಮಾಡಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬೇಕು.

ಭಕ್ತ್ಯೈಕ ಲಭ್ಯಃ ಪುರುಷೋತ್ತಮೋಽಪಿ ಜಗತ್ ಪ್ರಸೂತಿ ಸ್ಥಿತಿನಾಶ ಹೇತುಃ॥
ಅಕಿಂಚನಂ ನಾನ್ಯಗತಿಂ ಶರಣ್ಯಃ ಗೃಹಾಣಮಾಂ ಕ್ಲೇಶಿನಮಂಬುಜಾಕ್ಷ ॥

ಶ್ರೀಮದ್‌ಭಾಗವತದಲ್ಲಿ ಭಗವಂತನನ್ನು "ತಮದ್ಭುತಂ ಬಾಲಕಮಂಬುಜೇಕ್ಷಣಂ" ಎಂದಾಗಿ ಸ್ತೋತ್ರಮಾಡಿರುವುದನ್ನು ಇಲ್ಲಿ ನೆನೆಯಬಹುದು.

ಇಂಥ ಅಂಬುಜಾಕ್ಷನಾದ ಶ್ರೀ ಭಗವಂತನನ್ನು ಭಕ್ತಿಯಿಂದ ಸೇವಿಸಿದರೆ ಸುಖ ಅಂದರೆ ಮೋಕ್ಷರೂಪವಾದ ಶಾಶ್ವತ ಸುಖ ದೊರೆಯುವದು ನಿಶ್ಚಿತ.

ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಹೀಗೆ ಹೇಳಿದ್ದಾನೆ.

ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ ।
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿತೇ ॥ (೧೦-೧೦)

ಯಾವಾಗಲೂ ಮನಸ್ಸನ್ನು ಪರಮಾತ್ಮನಲ್ಲಿಯೇ ಇಟ್ಟು ಯಾರು ಭಕ್ತಿಪೂರ್ವಕವಾಗಿ ಅವನನ್ನೇ ಭಜಿಸುವರೋ ಅವರಿಗೆ ಜ್ಞಾನರೂಪವಾದ ಮೋಕ್ಷವನ್ನು ಭಗವಂತನು ಕೊಡುತ್ತಾನೆ. ಇದು ನಿಶ್ಚಯವು.

"ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಎಂಬ ಮೈತ್ರಾಯಣಿ ಉಪನಿಷತ್ತಿನ ಉಕ್ತಿಯಂತೆ ಮನಸ್ಸು ಈ ಸಂಸಾರದ ಬಂಧನಕ್ಕೂ ಸಂಸಾರದ ನಿವೃತ್ತಿಗೂ ಕಾರಣೀಭೂತವಾದ್ದರಿಂದ ದಾಸರು "ಅಂಬುಜಾಕ್ಷನ ಭಜಿಸಿ ಸುಖಿಯಾಗು ಮನವೇ" ಎಂಬುದಾಗಿ ಮನಸ್ಸನ್ನು ಕುರಿತು ಹೇಳಿದ ಮಾತು ಗಮನಾರ್ಹವಾಗಿದೆ.

ಎಲುಬು ರಕ್ತ ಮಾಂಸಗಳ ಮೇಲೆ ಚರ್ಮದ ಹೊದಿಕೆ
ಒಳಗೆ ಮಲಮೂತ್ರಾದಿ ಕ್ರಿಮಿರಾಶಿ ಇಹವು ।
ಹಲವು ವ್ಯಾಧಿಯ ಬೀಡು ಪಂಚಭೂತದ ನಾಡು
ಬಲುಹು ದೇಹವ ನೆಚ್ಚಿ ಕೆಡಬೇಡ ಮನವೇ ॥ ೧ ॥

ಮಾನವ ದೇಹದ ವಾಸ್ತವಿಕ ಸ್ವರೂಪವನ್ನು ವಿವರಿಸುತ್ತಾರೆ ಶ್ರೀ ದಾಸರು—

ಈ ಮಾನವ ದೇಹವೆಂದರೆ, ಎಲುಬು, ರಕ್ತ, ಮಾಂಸಗಳ ಮೇಲೆ ಚರ್ಮದ ಹೊದಿಕೆ ಇದ್ದು ಒಳಗೆ ಮಲಮೂತ್ರಾದಿಗಳು ತುಂಬಿಕೊಂಡಿವೆ. ಈ ದೇಹವು ಅನೇಕ ವ್ಯಾಧಿಗಳಿಗೆ ಆಗರವೆನಿಸಿದೆ. ಪಂಚಮಹಾಭೂತಗಳಿಂದ ಇದು ನಿರ್ಮಿತವಾಗಿದೆ. ಬಲವಾದ ಇಂಥ ನಶ್ವರವಾದ ದೇಹವನ್ನು ಮೆಚ್ಚಿ ಕೆಡಬೇಡಿರೆಂದು ದಾಸರು ಇಲ್ಲಿ ಎಚ್ಚರಿಕೆ ಕೊಟ್ಟಿದ್ದಾರೆ.

ಮೇಲಿನ ವಿಷಯವನ್ನು ಶ್ರೀಮದ್ಭಾಗವತ ಮಾಹಾತ್ಮ್ಯದ ಶ್ಲೋಕವು ಚೆನ್ನಾಗಿ ಸಮರ್ಥಿಸುತ್ತದೆ—

ಅಸ್ಥಿಸ್ತಂಭಂ ಸ್ನಾಯು ಬದ್ಧಂ ಮಾಂಸ ಶೋಣಿತ ಲೇಪಿತಮ್ ।
ಚರ್ಮಾವನದ್ಧಂ ದುರ್ಗಂಧಂ ಪಾತ್ರಂ ಮೂತ್ರ ಪುರೀಷಯೋಃ ॥
ಜರಾಶೋಕ ವಿಪಾಕಾರ್ತಂ ರೋಗ ಮಂದಿರಮಾತುರಂ ।
ದುಷ್ಪೂರಂ ದುರ್ಧರಂ ದುಷ್ಟಂ ಸದೋಷಂ ಕ್ಷಣಭಂಗುರಮ್ ॥

ಮಾನವನ ದೇಹಕ್ಕೆ ಆಧಾರವಾಗಿರುವ ಕಂಬಗಳೆಂದರೆ ಎಲುಬುಗಳು. ಈ ಎಲುಬುಗಳನ್ನು ಕಟ್ಟಿರುವದು ನರಗಳಿಂದ. ಇಂಥ ಎಲುಬುಗಳ ಗೂಡಿಗೆ ಹಚ್ಚಿರುವದು

ಮಾಂಸ ಮತ್ತು ರಕ್ತ. ಇದನ್ನು ಮುಚ್ಚಿರುವದು ಚರ್ಮ. ಇದು ಕೆಟ್ಟವಾಸನೆಯ ಗೂಡು (ಮಲ, ಮೂತ್ರಾದಿಗಳಿಂದಾಗಿ) ಇದಕ್ಕೆ ತಗಲುವದು ಮುಪ್ಪು. ರಜೋ ಗುಣದಿಂದ ಕೂಡಿದ ದೇಹವು ಇಷ್ಟಿದ್ದರೂ ಶಾಶ್ವತವೇ ? ಇಲ್ಲ ಅಶಾಶ್ವತ (ನಶ್ವರ) ವಾಗಿದೆ.

ಈ ಮಾನವ ದೇಹವು ಪಂಚಮಹಾಭೂತಗಳಿಂದ ಕೂಡಿದ್ದಾಗಿದೆಯೆಂಬ ವಿಷಯವನ್ನು "ಗರ್ಭೋಪನಿಷತ್" ನಲ್ಲಿ ಹೀಗೆ ತಿಳಿಸಿದ್ದಾರೆ.

ಪಂಚಾತ್ಮಕಂ ಪಂಚಸುವರ್ತಮಾನಂ
ಷಡಾಶ್ರಯಂ ಷಡ್ಗುಣಯೋಗ ಯುಕ್ತಮ್ ।
ತತ್ಸಪ್ತಧಾತು ತ್ರಿಮಲಂ ದ್ವಿಯೋನಿ
ಚತುರ್ವಿಧಾಹಾರಮಯಂ ಶರೀರಮ್ ॥

ಪಂಚಮಹಾಭೂತಗಳಿಂದ ತಯಾರಾದ ಪಂಚ ವಿಷಯಗಳಲ್ಲಿ ಇರುವಂಥ ಷಡ್ರಸಾದಿ ಗಳಿಗೆ ಆಶ್ರಯವಾದ ಷಡ್ಗುಣಯೋಗ ಯುಕ್ತವಾದ ಸಪ್ತಧಾತು, ತ್ರಿಮಲ ಸ್ತ್ರೀಪುಂಯೋನಿಗಳುಳ್ಳ ನಾಲ್ಕು ತರದ ಆಹಾರಮಯವಾಗಿ ಇರುವದು ಈ ದೇಹವು.

ಇದನ್ನೇ ಶ್ರೀಮನ್‌ಮಹಾಭಾರತದಲ್ಲಿ ಹೀಗೆ ವಿವರಿಸಿದ್ದಾರೆ.

ಚೇಷ್ಟಾವಾಯುಃ ಖಮಾಕಾಶ ಮೂಷ್ಮಾಗ್ನಿಃ ಸಲಿಲಂ ದ್ರವಃ ।
ಪೃಥಿವೀ ಚಾತ್ರ ಸಂಘಾತಃ ಶರೀರಂ ಪಾಂಚ ಭೌತಿಕಮ್ ॥ (ಶಾಂತಿಪರ್ವ)

ಮನುಷ್ಯ ದೇಹವು ಪಂಚಮಹಾಭೂತಗಳ ಸಂಘಾತವೇ ಆಗಿದೆ. ಮಾನವರು ಮಾಡುವ ಚೇಷ್ಟೆಯು ವಾಯುವಿಗೆ ಸಂಬಂಧಿಸಿದ್ದಾಗಿದೆ. ಶೂನ್ಯವಾಗಿರುವದು- (ಕಿವಿ, ಮೂಗು ಮುಂತಾದವುಗಳಲ್ಲಿ) ಆಕಾಶದ ಅಂಶವಾಗಿದೆ. ಶರೀರವು ಬಿಸಿಯಾ ಗಿರುವದು ಅಗ್ನಿಯ ಅಂಶವಾಗಿದೆ. ದ್ರವರೂಪವಾಗಿರುವದು (ಜೊಲ್ಲು, ರಕ್ತ, ಕಣ್ಣೀರು) ಇತ್ಯಾದಿ ಜಲದ ಅಂಶವಾಗಿದೆ. ಮತ್ತು ಶರೀರದಲ್ಲಿರುವ ಮೂಳೆ ಮಾಂಸ ಇವು ಪೃಥ್ವಿಯ ಅಂಶವಾಗಿದೆ. ಒಟ್ಟಿನಲ್ಲಿ ಮಾನವ ಶರೀರವು ಪಂಚಮಹಾಭೂತ ಗಳಿಂದ ಕೂಡಿದ್ದಾಗಿದೆ-

ಮೃತ್ಯುವಿನ ವಶವಾಗಿರುವ ಈ ದೇಹವನ್ನು ನಂಬಿ ಕೆಡಬೇಡ ಮನವೇ ಎನ್ನು ತ್ತಿದ್ದಾರೆ ಶ್ರೀ ದಾಸರು. ಇಲ್ಲಿ "ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮ ಮಾಚರೇತ್" ಎಂಬ ಸುಭಾಷಿತವನ್ನು ನೆನಪಿಸಿಕೊಳ್ಳಬಹುದು.

ಸತಿಸುತರು ಹಿತರೆಂದು ಮತಿಮರೆದು ಮಮತೆಯಲಿ
ಅತಿ ಕಾಂಕ್ಷೆಯಿಂದ ದುರ್ವಿಷಯ ಒಲಿದು
ಸತತ ಲಕ್ಷ್ಮೀಪತಿಯ ಶರಣೆನ್ನದಿಹ ಪರದ
ಗತಿ ಶೂನ್ಯನಾದಿ ನೀ ಕೆಡಬೇಡ ಮನವೇ ॥ ೨ ॥

ಹೆಂಡತಿಮಕ್ಕಳು ಹಿತ ಮಾಡುವವರೆಂದು ಬಗೆದು ಅವರಲ್ಲಿ ಅತಿಯಾದ ಪ್ರೀತಿಯನ್ನು ಮಾಡುತ್ತ, ದುರ್ವಿಷಯಗಳಲ್ಲಿ ಅತ್ಯಾಶೆಯನ್ನು ಮಾಡಿ, ಲಕ್ಷ್ಮೀಪತಿಯಾದ ಶ್ರೀಹರಿಯನ್ನು ಶರಣುಹೊಂದದೇ, ಇಹಪರಗಳೆರಡನ್ನೂ ಕಳೆದುಕೊಂಡು ದುರ್ಗತಿಯನ್ನು ಹೊಂದಬಾರದೆಂದು ಶ್ರೀ ದಾಸರು ಎಚ್ಚರಿಕೆ ನೀಡಿದ್ದಾರೆ.

ಶ್ರೀಮದ್ಭಾಗವತದಲ್ಲಿ ಹೆಂಡತಿ, ಮಕ್ಕಳು, ಸಂಪತ್ತು ಇವೆಲ್ಲ ಅಸ್ಥಿರವಾದ ವಸ್ತುಗಳಾದ್ದರಿಂದ ಅವುಗಳಲ್ಲಿ ಆಸಕ್ತಿಯನ್ನು, ಮಮತೆಯನ್ನು ಹೊಂದಬಾರದೆಂದು ತಿಳಿಸಿದ್ದಾರೆ.

ರಾಯಃ ಕಲತ್ರಂ ಪಶವಃ ಸುತಾದಯೋ
ಗೃಹಾ ಮಹೀಕುಂಜರ ಕೋಶ ಭೂತಯಃ ।
ಸರ್ವೇಽರ್ಥಕಾಮಾಃ ಕ್ಷಣ ಭಂಗುರಾಯುಷಃ
ಕುರ್ವಂತಿ ಮರ್ತ್ಯಸ್ಯ ಕಿಯತ್ಪ್ರಿಯಂ ಚಲಾಃ ॥ (೭-೭-೪೧)

ಸಂಪತ್ತು, ಹೆಂಡತಿ, ಮಕ್ಕಳು, ಮನೆ, ಹೊಲ, ಆನೆ, ಕೋಶ ಮೊದಲಾದವು ಅಲ್ಪ ಕಾಲವಿದ್ದು ನಾಶವಾಗುವ ಭೋಗಸಾಮಗ್ರಿಗಳು. ಅಸ್ಥಿರವಾದ ಈ ವಸ್ತುಗಳು ಮನುಷ್ಯನನ್ನು ಎಂದೂ ಸಂತೋಷಪಡಿಸಲಾರವು. ಕಾರಣ ಇವುಗಳಲ್ಲಿ ಮಮತೆಯನ್ನು ತೊರೆದು ಹೇಯತಾ ಬುದ್ಧಿಯನ್ನು ತಾಳಬೇಕಾದದ್ದು ಅತೀ ಅವಶ್ಯವಾಗಿದೆ.

ಹೀಗೆ ಹೇಯತಾಬುದ್ಧಿಯನ್ನು ತಾಳಿದ ಅಂಬರೀಷ ಚಕ್ರವರ್ತಿಯ ಉದಾಹರಣೆಯನ್ನು ಇಲ್ಲಿ ಕಾಣಬಹುದು.

ಗೃಹೇಷು ದಾರೇಷು ಸುತೇಷು ಬಂಧುಷು
ದ್ವಿಪೋತ್ತಮ ಸ್ಯಂದನ ವಾಜಿ ಪತ್ತಿಷು ॥
ಅಕ್ಷಯ್ಯ ರತ್ನಾಭರಣಾಂಬರಾದಿಷು
ಅನಂತ ಕೋಶೇಷ್ವಕರೋದ ಸನ್ಮತಿಂ ॥ ಶ್ರೀ ಭಾಗವತ (೯-೬-೧೫)

ಮನೆಗಳು, ಹೆಂಡರು, ಮಕ್ಕಳು, ಬಂಧುಗಳು, ಉತ್ತಮವಾದ ಗಜ, ರಥಾದಿ ಸೈನ್ಯ ಬಲ, ಅನಂತ ರತ್ನಆಭರಣಾದಿ ವಸ್ತುಗಳು, ದ್ರವ್ಯಭರಿತ ಕೋಶಗಳು, ಇವೆಲ್ಲವೂ ನಶ್ವರವಾದ್ದರಿಂದ ಅವುಗಳಲ್ಲಿ ಅಂಬರೀಷ ಚಕ್ರವರ್ತಿಯು ಹೇಯತಾ ಬುದ್ಧಿಯನ್ನು ತಾಳಿದನು.

ಇಲ್ಲಿ "ಅತಿ ಕಾಂಕ್ಷೆ" ಎಂದರೆ ಅತಿಯಾದ ಇಚ್ಛೆ. (ಅತ್ಯಾಸಕ್ತಿ) ಎಂದು ಅರ್ಥವಾಗುತ್ತದೆ. ಇದು ವಿಷಯ ಪದಾರ್ಥಗಳಲ್ಲಿ ಇರಕೂಡದು ಎಂದು ತಿಳಿಸಿದ್ದಾರೆ.

ಈಶಾವಾಸ್ಯೋಪನಿಷತ್ತಿನಲ್ಲಿ ಇದನ್ನೇ —

"ತೇನತ್ಯಕ್ತೇನ ಭುಂಜೀಥಾಃ ಮಾಗೃಧಃ ಕಸ್ಯಸ್ವಿದ್ಧನವ್"

ಎಂದಿದ್ದಾರೆ. ಪರಮಾತ್ಮನಿಂದ ಕೊಡಲ್ಪಟ್ಟ ಅನ್ನಾದಿ ವಿಷಯಗಳನ್ನು ಅನುಭವಿಸಬೇಕು. ಇನ್ನೊಬ್ಬರ ಸಂಪತ್ತು ನೋಡಿ ಆಸೆ ಪಡಬಾರದು.

ಪರಮಾತ್ಮನನ್ನೇ ಶರಣು ಹೊಂದಬೇಕು ಎಂಬುದನ್ನು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೀಗೆ ತಿಳಿಸಿದ್ದಾನೆ.

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥ (೧೮-೬೬)

ಅವೈಷ್ಣವ ಸರ್ವಧರ್ಮಗಳನ್ನು ತೊರೆದು ಪರಮಾತ್ಮನಲ್ಲಿಯೇ ಮನಸ್ಸಿಟ್ಟು ಶರಣಾಗತನಾದರೆ ಪರಮಾತ್ಮನು ಎಲ್ಲ ಪಾಪಗಳನ್ನು ನಾಶಪಡಿಸಿ ಸಂಸಾರ ಭಯವನ್ನು ತಪ್ಪಿಸಿ ಮೋಕ್ಷವನ್ನು ಕೊಡುವದು ನಿಶ್ಚಿತವು.

ರಕ್ಷತೀತ್ಯೇವ ವಿಶ್ವಾಸಃ ತದೀಯೋಽಹಮಿತಿ ಸ್ಮೃತಿಃ ।
ಶರಣಾಗತಿ ರೇಷಾ ಸ್ಯಾತ್ ವಿಷ್ಣೌ ಮೋಕ್ಷ ಫಲಪ್ರದಾ ॥
ಶ್ರೀವಿಷ್ಣು ಮಹಾಪುರಾಣ

ಶ್ರೀಹರಿಯು ರಕ್ಷಿಸುತ್ತಾನೆಂಬ ವಿಶ್ವಾಸ, ತಾನು ಪರಮಾತ್ಮನ ದಾಸನೆಂಬ ನಿರಂತರ ಸ್ಮರಣೆ– ಇವೆಲ್ಲವೂ ಶರಣಾಗತಿ ಎನಿಸುತ್ತವೆ. ಇಂಥ ಶರಣಾಗತಿಯು ಸಾಧನ ಪೂರ್ತಿಯ ನಂತರ ಮೋಕ್ಷರೂಪ ಫಲವನ್ನು ಕೊಡುತ್ತದೆ.

ಈ ಎಲ್ಲ ಕಾರಣಗಳಿಂದ ಶ್ರೀ ದಾಸರು ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನನ್ನು ಶರಣು ಹೊಂದಿ ಇಹಪರಗಳೆರಡನ್ನು ಪಡೆದುಕೊಂಡು ಜೀವನವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದು ಇಲ್ಲಿ ಒತ್ತಿ ಹೇಳಿದ್ದಾರೆ.

ಪರರ ನಿಂದಿಸದೇ ಪರವಧುಗಳನು ಬಯಸದೇ
ಗುರುವಿಪ್ರಸೇವೆಯನು ಮಾಡುಬಿಡದೆ ।
ಹರಿಸ್ತುತಿಯ ನೀ ಕೇಳು ಹರಿಕೀರ್ತನೆಯ ಪಾಡು
ಸಿರಿ ಪುರಂದರವಿಠಲನೊಲಿದು ಪಾಲಿಸುವ ॥ ೩ ॥

ಇಲ್ಲಿ ದಾಸರು ಪ್ರತಿಯೊಬ್ಬ ಮಾನವನು ಮಾಡಲೇಬೇಕಾದ ಕೆಲವೊಂದು ಕರ್ತವ್ಯಗಳ ಬಗೆಗೆ ವಿವರಿಸಿದ್ದಾರೆ.

ಭಗವದ್ಭಕ್ತರನ್ನು ನಿಂದಿಸಕೂಡದು. ಇನ್ನೊಬ್ಬರ ಹೆಣ್ಣನ್ನು ಬಯಸಕೂಡದು. ಗುರುಗಳ ಹಾಗೂ ಬ್ರಾಹ್ಮಣರ ಸೇವೆಯನ್ನು, ಸತತವೂ ಮಾಡುತ್ತಿರ

ಬೇಕು. ಶ್ರೀ ಹರಿಯ ಸ್ತೋತ್ರವನ್ನು ಕೇಳುತ್ತಿರಬೇಕು. ಶ್ರೀ ಹರಿಯ ಕೀರ್ತನೆಯನ್ನು ತಪ್ಪದೇ ಮಾಡುತ್ತಿರಬೇಕು. ಹೀಗೆ ಮಾಡುತ್ತಿದ್ದರೆ ಲಕ್ಷ್ಮೀಪತಿಯಾದ ಶ್ರೀ ಪುರಂದರವಿಠ್ಠಲನು ನಮಗೆ ಮೋಕ್ಷಾದಿ ಪುರುಷಾರ್ಥಗಳನ್ನು ಕೊಟ್ಟು ರಕ್ಷಿಸುವದರಲ್ಲಿ ಸಂದೇಹವಿಲ್ಲ.

ಮೊದಲನೆಯದಾಗಿ– "ಬ್ರಾಹ್ಮಣಾನ್ ನ ನಿಂದ್ಯೇತ್-ತದ್ವ್ರತಮ್" ಎಂಬ ಛಾಂದೋಗ್ಯ ಉಪನಿಷತ್ತಿನ ವಾಣಿಯಂತೆ ಭಗವದ್‌ಭಕ್ತರ ನಿಂದೆಯನ್ನು ಸರ್ವಥಾ ಮಾಡಕೂಡದು.

ಇನ್ನೊಬ್ಬರ ವಧುಗಳನ್ನು ಬಯಸಬಾರದು. ಅವರನ್ನು ತಾಯಿಯಂತೆ ಕಾಣಬೇಕು. ಶ್ರೀಸ್ಕಂದ ಪುರಾಣ ಹೀಗೆ ಹೇಳುತ್ತದೆ.

ಮಾತೃವತ್ ಪರದಾರಾಣಿ ಪರದ್ರವ್ಯಾಣಿ ಲೋಷ್ಟವತ್ ।
ಯಃ ಪಶ್ಯತಿ ನರೋನಿತ್ಯಂ ಸ ತಪಃ ಫಲಮಾಶ್ನುತೇ ॥

ಇನ್ನೊಬ್ಬರ ಹೆಣ್ಣುಮಕ್ಕಳನ್ನು ತಾಯಿಯಂತೆ, ಇನ್ನೊಬ್ಬರ ದ್ರವ್ಯವನ್ನು ಮಣ್ಣಿಗೆ ಸಮಾನವೆಂದು ಯಾವನು ತಿಳಿಯುವನೋ ಅವನು ತಪಸ್ಸಿನ ಫಲವಾದ ಸಿದ್ಧಿಯನ್ನು ಪಡೆಯುತ್ತಾನೆ.

ಇನ್ನು ಗುರುಗಳ ಅನುಗ್ರಹವಿಲ್ಲದೇ ಶ್ರೀಹರಿಯ ಅನುಗ್ರಹ ದೊರೆಯಲಾರದು. ಕಾರಣ ಗುರುಗಳ ಸೇವೆಯನ್ನು ಮಾಡುವವರಾಗಿ ಅವರ ಪ್ರಸಾದವನ್ನು ಹೊಂದಬೇಕು.

ಓಂ ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ಓಂ ಎಂಬ ಸೂತ್ರದಲ್ಲಿ ಸೂತ್ರಕಾರರು ಗುರುಪ್ರಸಾದವೇ ಶ್ರೇಷ್ಠವೆಂದು ತಿಳಿಸಿದ್ದಾರೆ. ಗುರುಗಳ ಸೇವೆಯನ್ನು ಮಾಡಿದಲ್ಲಿ— ಅವರು ನಮಗೆ ಪರಮಾತ್ಮನನ್ನು ಕಾಣಲು ಅವಶ್ಯವಾದ ಜ್ಞಾನವನ್ನು ಕರುಣಿಸುತ್ತಾರೆ.

ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೀಗೆ ತಿಳಿಸುತ್ತಾನೆ–

ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಃ ತತ್ತ್ವದರ್ಶಿನಃ ॥ (೪ ೩೪)

ಮತ್ತು "ಗುರುಪ್ರಸಾದೋ ಬಲವಾನ್ ನ ತಸ್ಮಾದ್ ಬಲವತ್ತರಂ",

"ಅಪ್ಯಚ್ಯುತೋ ಗುರುದ್ವಾರಾ ಪ್ರಸಾದಕೃದಹಾತ್ವಿತಿ" ಇತ್ಯಾದಿ ವಾಕ್ಯಗಳು– ಗುರುಪ್ರಸಾದವು ಅತ್ಯವಶ್ಯವೆಂಬುದನ್ನು ತಿಳಿಸಿಕೊಡುತ್ತವೆ. ಇದಕ್ಕಾಗಿ ಅದರ ಸೇವೆಯನ್ನು ಮಾಡಬೇಕು ಎಂಬುದು ನಿರ್ವಿವಾದವೇ ಸರಿ.

ಗುರುಸೇವೆ ಮಾಡುವ ಕ್ರಮವನ್ನು ಶ್ರೀಮನ್ ಮಹಾಭಾರತದಲ್ಲಿ ತಿಳಿಸಿದ್ದಾರೆ.

ಗುರುಭ್ಯ ಆಸನಂ ದೇಯಂ ಕರ್ತವ್ಯಂ ಚಾಭಿವಾದನಮ್ ।
ಗುರೂನಭ್ಯರ್ಚ ಯುಜ್ಯಂತೇ ಆಯುಷಾ ಯಶಸಾ ಶ್ರಿಯಾ ॥ (ಶಾಂತಿಪರ್ವ)
(೧೯೩ ನೆ ಅಧ್ಯಾಯ)

ಗುರುಗಳು ಬಂದೊಡನೆಯೇ ಅವರಿಗೆ ಕುಳಿತುಕೊಳ್ಳಲು ಆಸನವನ್ನು ಕೊಡಬೇಕು. ನಂತರ ಅಭಿವಾದನಪೂರ್ವಕ ನಮಸ್ಕಾರ ಮಾಡಬೇಕು. ಆ ಮೇಲೆ ಅವರನ್ನು ಸತ್ಕರಿಸಬೇಕು. ಹೀಗೆ ಮಾಡುವುದರಿಂದ ಮನುಷ್ಯರು ಆಯುಷ್ಯದಿಂದಲೂ, ಯಶಸ್ಸಿನಿಂದಲೂ, ಐಶ್ವರ್ಯದಿಂದಲೂ ಸಂಪನ್ನರಾಗುತ್ತಾರೆ.

ವಿಪ್ರರ (ಬ್ರಾಹ್ಮಣರ) ಸೇವೆಯನ್ನು ಕೂಡ ನಿತ್ಯದಲ್ಲಿ ಮಾಡುತ್ತಿರಬೇಕು. ಇದನ್ನೇ ಶ್ರೀಮನ್‌ಮಹಾಭಾರತಕಾರರು "ಸಾಯಂ ಪ್ರಾತಶ್ಚ ವಿಪ್ರಾಣಾಂ ಪೂಜನಂ ಚಯಥಾ ವಿಧಿ" ಎಂದಿದ್ದಾರೆ. ಮತ್ತು

ದರ್ಶನೇ ದರ್ಶನೇ ನಿತ್ಯಂ ಸುಖಪ್ರಶ್ನಮುದಾಹರೇತ್ ।
ಸಾಯಂ ಪ್ರಾತಶ್ಚ ವಿಪ್ರಾಣಾಂ ಪ್ರವಿಷ್ಟಮಭಿವಾದನಮ್ ॥ (ಶಾಂತಿಪರ್ವ)

ಬ್ರಾಹ್ಮಣರನ್ನು ಕಂಡೊಡನೆಯೇ ಅವರಲ್ಲಿ ಕುಶಲಪ್ರಶ್ನೆಯನ್ನು ಮಾಡುತ್ತಿರಬೇಕು. ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ಬ್ರಾಹ್ಮಣರಿಗೆ ಅಭಿವಾದನಪೂರ್ವಕ ನಮಸ್ಕಾರವನ್ನು ಮಾಡಬೇಕು.

ಇನ್ನು ನಿತ್ಯವೂ ಶ್ರೀಹರಿಯ ಸ್ತೋತ್ರಗಳನ್ನು ಕೇಳುತ್ತಿರಬೇಕು. ಶ್ರೀಹರಿಯ ಕೀರ್ತನೆಯನ್ನು ಮಾಡುತ್ತಿರಬೇಕು.. ಹೀಗೆ ಮಾಡುವವನು ಸಾಧನ ಪೂರ್ತಿಯಾದ ಮೇಲೆ ಮತ್ತೆ ಸಂಸಾರಕ್ಕೆ ಬರುವುದೇ ಇಲ್ಲ. ಈ ವಿಷಯವನ್ನು ಶ್ರೀಮದ್ ಭಾಗವತದಲ್ಲಿ ಹೀಗೆ ತಿಳಿಸಿದ್ದಾರೆ.

ಶೃಣ್ವನ್ ಗೃಣನ್ ಸಂಸ್ಮರಯಂಶ್ಚ ಚಿಂತಯನ್
ನಾಮಾನಿರೂಪಾಣಿಚ ಮಂಗಲಾನಿ ತೇ ।
ಕ್ರಿಯಾಸು ಯಸ್ತ್ವಚ್ಚರಣಾರವಿಂದಯೋಃ
ಆವಿಷ್ಟ ಚಿತ್ತೋನ ಭವಾಯ ಕಲ್ಪತೇ ॥ (೧೦-೩-೩೭)

ಪರಮಾತ್ಮನ ಪವಿತ್ರವಾದ ನಾಮಗಳನ್ನು, ಸ್ತೋತ್ರಗಳನ್ನು ಕೇಳುತ್ತ ಹಾಗೂ ಕೀರ್ತನೆಯನ್ನು ಮಾಡುತ್ತ, ಮಂಗಳ ರೂಪವನ್ನು ಸ್ಮರಿಸುತ್ತ, ಧ್ಯಾನಮಾಡುತ್ತ ಪರಮಾತ್ಮನ ಪಾದಾರವಿಂದಗಳಲ್ಲಿ ಇಡಲ್ಪಟ್ಟ ಚಿತ್ತ ಉಳ್ಳವರು (ಭಗವಂತನಲ್ಲಿ

ಅನನ್ಯ ಭಕ್ತಿಯುಳ್ಳವರು) ಸಂಸಾರ ಬಂಧನಕ್ಕೆ ಒಳಗಾಗುವುದಿಲ್ಲ. ಶ್ರೀ ಪುರಂದರ ವಿಠಲನು ಇಂಥವರಿಗೆ ಮೋಕ್ಷವನ್ನು ದಯಪಾಲಿಸುವದು ನಿಶ್ಚಿತವು.

ಹೀಗೆ ದಾಸಶ್ರೇಷ್ಠರಾದ ಶ್ರೀ ಪುರಂದರದಾಸರು ಈ ಪದ್ಯದಲ್ಲಿ—

ಮಾನವನಾಗಿ ಹುಟ್ಟಿ ಬಂದ ಪ್ರತಿಯೊಬ್ಬನೂ ಅವಶ್ಯವಾಗಿ ಮಾಡಲೇ ಬೇಕಾದ ಕರ್ತವ್ಯಗಳನ್ನು ಚೆನ್ನಾಗಿ ತಿಳಿಸಿಕೊಟ್ಟು ಸಜ್ಜನರನ್ನು ಉದ್ಧರಿಸಿದ್ದಾರೆ—

ಶ್ರೀಮಧ್ವೇಶಾರ್ಪಣಮಸ್ತು

|| ಶ್ರೀಃ ||

# ಅಂಬಿಗ ನಾ ನಿನ್ನ ನಂಬಿದೆ

ಶ್ರೀಪುರಂದರದಾಸರು

ಅಂಬಿಗ ನಾ ನಿನ್ನ ನಂಬಿದೆ । ಜಗ
ದಂಬಾರಮಣ ನಿನ್ನ ನಂಬಿದೆ || ಪ ||

ತುಂಬಿದ ಹರಿಗೋಲಂಬಿಗ ಅದ
ಕೊಂಬತ್ತು ಛಿದ್ರವು ಅಂಬಿಗ
ಸಂಭ್ರಮದಿಂದ ನೋಡಂಬಿಗ ಅದ
ರಿಂಬು ನೋಡಿ ನಡೆಸಂಬಿಗ || ೧ ||

ಹೊಳೆಯು ಭರವ ನೋಡಂಬಿಗ ಅದಕೆ
ಸೆಳವು ಘನವಯ್ಯ ಅಂಬಿಗ
ಸುಳಿಯೊಳು ಮುಳುಗಿದೆ ಅಂಬಿಗ ಎನ್ನ
ಸೆಳೆದು ಕೊಂಡೊಯ್ಯೋ ನೀನಂಬಿಗ || ೨ ||

ಆರು ತೆರೆಯು ನೋಡಂಬಿಗ || ಅದು
ಮೀರಿ ಬರುತಲಿದೆ ಅಂಬಿಗ
ಯಾರಿಂದಲಾಗದು ಅಂಬಿಗ ಅದ ನೀ
ವಾರಿಸಿ ದಾಟಿಸಂಬಿಗ || ೩ ||

ಸತ್ಯವೆಂಬುದೆ ಹುಟ್ಟಂಬಿಗ ಸದಾ
ಭಕ್ತಿಯೆಂಬುದೆ ಪಥವಂಬಿಗ
ನಿತ್ಯ ಮೂರುತಿ ಪುರಂದರವಿಠ್ಠಲ ನಮ್ಮ
ಮುಕ್ತಿ ಮಂಟಪಕೊಯ್ಯೋ ಅಂಬಿಗ ||೪ ||

ಈ ಪದ್ಯದಲ್ಲಿ ಸರ್ವತಂತ್ರ ಸ್ವತಂತ್ರನಾದ ಸರ್ವೋತ್ತಮನಾದ ಭಗವಂತನನ್ನು ದಾಸರು ಅಂಬಿಗನ ರೂಪದಲ್ಲಿ, ಕಂಡು ಮನವಾರೆ ಸ್ತುತಿಸಿ ಕೊಂಡಾಡಿದ್ದಾರೆ.

ಮೊದಲನೆಯದಾಗಿ, "ಅಂಬಿಗ ನಾ ನಿನ್ನ ನಂಬಿದೆ" ಎಂಬ ನುಡಿಯಲ್ಲಿ ಸಮುದ್ರವನ್ನು ದಾಟಲು ಅಂಬಿಗನನ್ನು ನಂಬುವ ಅವಶ್ಯಕತೆ ಇರುವಂತೆ ಈ ಸಂಸಾರ ವೆಂಬ ಸಮುದ್ರವನ್ನು ದಾಟಲು ಪರಮಾತ್ಮನನ್ನು ಅವಶ್ಯವಾಗಿ ನಂಬಿರಬೇಕು, ಎನ್ನುತ್ತಾರೆ ಶ್ರೀದಾಸರು.

ಶ್ರೀಕೃಷ್ಣನು ಭಗವದ್ಗೀತೆಯಲ್ಲಿ—

"ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್" (೧೨-೭)

ಎಂಬುದಾಗಿ ಹೇಳಿದ್ದಾನೆ. ಇದರಿಂದ ಪರಮಾತ್ಮನೇ ಈ ಜನನ ಮರಣ ರೂಪವಾದ ಸಂಸಾರ ಸಾಗರವನ್ನು ದಾಟಿಸುವ 'ಅಂಬಿಗ' ನೆಂಬುದು ಸ್ಪಷ್ಟವಾಗುತ್ತದೆ. ಇಂಥ ಪರಮಾತ್ಮನನ್ನು ನಂಬುವದು ಕೂಡ ಅವಶ್ಯವೇ ಸರಿ. ಅಂತೆಯೇ ಶ್ರೀ ದಾಸರು–

"ನಂಬಿ ಕೆಟ್ಟವರಿಲ್ಲವೋ ರಂಗಯ್ಯನ ನಂಬದೇ ಕೆಟ್ಟರೆ ಕೆಡಲಿ" ಎಂದಿದ್ದಾರೆ.

ಇನ್ನು "ಜಗದಂಬಾರಮಣ ನಿನ್ನ ನಂಬಿದೆ" ಎನ್ನುವಲ್ಲಿ ಈ ಕೆಳಗೆ ವಿವರಿಸಿದ ಭಾವವು ಅಡಗಿದೆ—

ಜಗತ್ತಿಗೆ ತಾಯಿಯಾದ ಶ್ರೀ ಲಕ್ಷ್ಮೀ ದೇವಿಯರಿಗೆ ರಮಣನಾದ ಅಂದರೆ ಸ್ವಾಮಿಯಾದ (ಪತಿಯಾದ) ಪರಮಾತ್ಮನೇ ನಿನ್ನನ್ನು ನಂಬಿದ್ದೇನೆ ಎನ್ನುತ್ತಾರೆ ಶ್ರೀದಾಸರು.

ಸರ್ವ ಜಗತ್ತಿಗೆ ಸ್ವಾಮಿಯಾದ ಶ್ರೀವಿಷ್ಣುವಿನ ಪತ್ನಿಯಾದ ಲಕ್ಷ್ಮೀದೇವಿಯು ಭಕ್ತರಿಂದ ಶ್ರೀಹರಿ ಸಮೇತ ಉಪಾಸಿತಳಾಗಿ ತೀವ್ರದಲ್ಲಿ ಮುಕ್ತಿಯನ್ನು ಕೊಡಿಸುತ್ತಾಳೆ. (ಗೀತಾತಾತ್ಪರ್ಯ) "ವಿಷ್ಣುನಾ ಸಹಿತಾ ಧ್ಯಾತಾ ಸಾಪಿ ತುಷ್ಟಿಂ ಪರಾಂ ವ್ರಜೇತ್"ಎಂದಿರುವದರಿಂದ ವಿಷ್ಣುವಿನಿಂದ ಸಹಿತವಾದ ಲಕ್ಷ್ಮೀದೇವಿಯರ ಸ್ಮರಣೆಯು ಅವರಿಗೆ ಅತ್ಯಂತ ಪ್ರಿಯಕರವೆಂದು ತಿಳಿದು ಬರುತ್ತದೆ. ಆದ್ದರಿಂದ ಪರಮಾತ್ಮನನ್ನು ಹರಿ, ಕೃಷ್ಣ, ಎಂಬುದಾಗಿ ಸ್ಮರಿಸುವ ಬದಲು ಶ್ರೀಕೃಷ್ಣ, ಶ್ರೀಹರಿ ಎಂದು ಮುಂತಾಗಿ ಸ್ಮರಿಸುವದು ಹೆಚ್ಚು ಸಮರ್ಪಕ.

ಸದೋತ್ತಮಃ ಕಿಂತು ಯದಾ ತು ಸಾ ಮೇ
ವಾಮಾರ್ಧರೂಪಾ ದಕ್ಷಿಣಾ ನಾಮಧೇಯಾ ॥ ಶ್ರೀ ಮ. ಭಾ. ತಾ. ನಿರ್ಣಯ

ಶ್ರೀ ಲಕ್ಷ್ಮೀದೇವಿಯರು ನಿತ್ಯಾವಿಯೋಗಿನಿಯಾಗಿ ಪರಮಾತ್ಮನ ಎಡಭಾಗದಲ್ಲಿ ಸರ್ವದಾ ವಾಸಿಸುವದರಿಂದ ಅವಳು "ದಕ್ಷಿಣಾ" ಎಂದು ಹೆಸರು ಪಡೆದಿದ್ದಾಳೆ. ಕಾರಣ ಲಕ್ಷ್ಮೀದೇವಿಯರಿಂದ ಸಹಿತನಾದ ಆ ಭಗವಂತನನ್ನು ಸ್ಮರಿಸುವದು ಅವಶ್ಯವೆಂದು ತಿಳಿಸಿದ್ದಾರೆ.

ತುಂಬಿದ ಹರಿಗೋಲಂಬಿಗ । ಅದಕೊಂಬತ್ತು ಛಿದ್ರವು ಅಂಬಿಗ ।
ಸಂಭ್ರಮದಿಂದ ನೋಡಂಬಿಗ । ಅದರಿಂಬು ನೋಡಿ ನಡೆಸಂಬಿಗ ॥ ೧ ॥

ಇಲ್ಲಿ ಮಾನವನ ಶರೀರದ ವರ್ಣನೆಯನ್ನು ಮಾಡುತ್ತ ನಿನ್ನ ಅಧೀನನಾದ ಈ ಜೀವನನ್ನು ಸಂಸಾರದಿಂದ ಪಾರುಮಾಡು ಎನ್ನುತ್ತಾರೆ.

ಮಾನವನ ಶರೀರವು ಪೃಥ್ವಿ, ಅಪ್, ತೇಜ, ವಾಯು, ಆಕಾಶ ಎಂಬ ಪಂಚ ಮಹಾಭೂತಗಳಿಂದ ಉಂಟಾಗಿದೆ ಮತ್ತು ಅಸ್ಥಿ, ಮಜ್ಜ, ಮಾಂಸ ಮುಂತಾದ ಧಾತುಗಳಿಂದ ತುಂಬಿದೆ. "ಶರೀರಂ ಚ ನವಚ್ಛಿದ್ರಂ" ಹಾಗೂ ನವದ್ವಾರೇ ಪುರೇ ದೇಹಿ ಹಂಸೋ ಲೋಲಾಯತೇ ಬಹಿಃ ॥ ಶ್ವೇತಾಶ್ವತರೋಪನಿಷತ್ ॥
ಎಂಬಂತೆ ಈ ದೇಹವು ನವದ್ವಾರಗಳಿಂದ ಕೂಡಿದ್ದಾಗಿದೆ.

ಜೀವನದಲ್ಲಿ ಪ್ರತಿಯೊಬ್ಬರೂ ಸರ್ವದಾ ಸುಖವನ್ನೇ ಬಯಸುತ್ತಾರೆ.

"ಸುಖಮೇವ ಮೇ ಸ್ಯಾತ್ ದುಃಖಂ ಮನಾಗಪಿ ಮಾಭೂತ್" ಎಂಬ ಉಕ್ತಿಯಂತೆ ದುಃಖರಹಿತವಾದ ಸುಖವನ್ನು ಹೊಂದಬಯಸುವದೇ ಒಂದು "ಸಂಭ್ರಮ"ವಾಗಿದೆ ಈ ಸೊಗಸಿಗೆ, ಸೌಕರ್ಯಕ್ಕೆ ಚ್ಯುತಿ ಬಾರದಿರಲಿ ಎಂದು ಸರ್ವರೂ ಪ್ರಯತ್ನಿಸುತ್ತಾರೆ. ಇದನ್ನು ಆ ಭಗವಂತನೊಬ್ಬನೇ ನಡೆಸಿಕೊಡಲು ಸಮರ್ಥ ಎಂಬುದಾಗಿ ಹೇಳುತ್ತಾರೆ.

ಹೊಳೆಯ ಭರವ ನೋಡಂಬಿಗ । ಅದಕೆ ಸೆಳವು ಘನವಯ್ಯ ಅಂಬಿಗ ।
ಸುಳಿಯೊಳು ಮುಳುಗಿದೆ ಅಂಬಿಗ । ಎನ್ನ ಸೆಳೆದು ಕೊಂಡೊಯ್ಯೋ ನೀ
ನಂಬಿಗ ॥ ೨ ॥

ಇಲ್ಲಿ ಸಂಸಾರ ಸಾಗರದ ವೇಗವು ಬಹಳ ಅಚಿಂತ್ಯವಾದದ್ದು ಎನ್ನುತ್ತಾರೆ. ಹೊಳೆಯಲ್ಲಿ (ನದಿಯಲ್ಲಿ) ಪ್ರವಾಹದ ವೇಗವು ಹೆಚ್ಚಾದಂತೆ ಸೆಳವು ಕೂಡ ಹೆಚ್ಚು ವದು ಎಲ್ಲರಿಗೂ ಅನುಭವಸಿದ್ಧ ವಿಷಯವೇ. ಅದು ಸಹಜವೂ ಕೂಡ. ಅದರಂತೆ ಜೀವನ ಪ್ರವಾಹದಲ್ಲಿ ಪ್ರತಿಯೊಬ್ಬನು ಭಗವದಧೀನನಾಗಿ ಕರ್ಮಾನುಸಾರವಾದ ವಿಚಾರ ಧಾರೆಯ ವೇಗದಲ್ಲಿ ಮುನ್ನಡೆಯುತ್ತಾನೆ. ಅವನ ಸಕಲ ಇಂದ್ರಿಯಗಳು ಆ ವಿಚಾರಧಾರೆಯಂತೆ ಕೆಲಸ ಮಾಡುತ್ತಲೇ ಇರುತ್ತವೆ.

ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ ಗೀತಾ (೨-೬೭)

ಎಂಬಂತೆ ಹರಿದಾಡುವ ಇಂದ್ರಿಯಗಳ ಬೆನ್ನುಹತ್ತಿದ ಮಾನವನ ಬುದ್ಧಿಯನ್ನು ಗಾಳಿಯು ನೀರಲ್ಲಿ ಚಲಿಸುತ್ತಿರುವ ನಾವೆಯನ್ನು ಎಳೆದೊಯ್ಯುವಂತೆ ಮನಸ್ಸು ವಿಷಯಗಳನ್ನು ಕುರಿತು ಸೆಳೆದುಕೊಂಡು ಹೋಗುವದು ನಿಶ್ಚಿತವು.

ಈ ಜೀವನದ ಸುಳಿಯಲ್ಲಿ ಸಿಕ್ಕ ಮನುಷ್ಯನು ಕುಟುಂಬ ಪೋಷಣೆಯಲ್ಲಿ ಮಾತ್ರವೇ ಮಗ್ನನಾಗಿ ಬಿಡುತ್ತಾನೆ- ಅಗ-



ಕುಟುಂಬ ಪೋಷಾಯು ಚ ಯನ್ನಿ
ಜಾಯುರ್ನ ಬುದ್ಧ್ಯೇತೇರ್ಥ ವಿಹತಂ ಪ್ರಮತ್ತಃ ।
ಸರ್ವತ್ರ ತಾಪತ್ರಯದುಃಖಿತಾತ್ಮಾ
ನಿರ್ವಿದ್ಯತೇ ನ ಸ್ವಕುಟುಂಬ ರಾಮಃ ॥ ಶ್ರೀಮದ್ಭಾಗವತ

ಎಂಬಂತೆ ಮನುಷ್ಯನು ಕುಟುಂಬ ಪೋಷಣೆಯಲ್ಲಿ ಮಗ್ನನಾಗಿ ಅದರ ಪಾಲನೆಗಾಗಿ ದ್ರವ್ಯಾದಿಗಳ ಸಂಪಾದನೆಯಲ್ಲಿಯೇ ತನ್ನ ಆಯುಷ್ಯವನ್ನು ವ್ಯಯಮಾಡಿ ಪ್ರಮತ್ತನಾಗುವನು. ಸರ್ವದಾ ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕ ಎಂಬ ತಾಪತ್ರಯ ದುಃಖಿತನಾದ ಮನಸ್ಸುಳ್ಳವನಾಗುವನು. ವೈರಾಗ್ಯವನ್ನು, ಜ್ಞಾನವನ್ನು ಹೊಂದದೆ ಈ ಕುಟುಂಬ ಪೋಷಣೆಯ ಸುಳಿಯಲ್ಲಿ ಮುಳುಗಿದ ಈ ಜೀವನನ್ನು ಸೆಳೆದು ಕೊಂಡು ಜ್ಞಾನ, ವೈರಾಗ್ಯ, ಭಕ್ತಿ ಮಾರ್ಗದತ್ತ ನಡೆಸಬೇಕಯ್ಯ ಅಂಬಿಗನೇ ಎನ್ನುತ್ತಾರೆ ದಾಸರು.

ಆರು ತೆರೆಯ ನೋಡಂಬಿಗ । ಅದು ಮೀರಿ ಬರುತಲಿದೆ ಅಂಬಿಗ
ಯಾರಿಂದಲಾಗದು ಅಂಬಿಗ । ಅದ ನೀ ವಾರಿಸಿ ದಾಟಸಂಬಿಗ ॥

ಈ ನುಡಿಯಲ್ಲಿ ಹಸಿವು, ಬಾಯಾರಿಕೆ, ಶೋಕ, ಮೋಹ, ಜರೆ, ಸಾವು ಎಂಬ ಆರು ತೆರೆಗಳು (ಷಡೂರ್ಮಿಗಳು) ಜೀವನದ ಪ್ರತಿಯೊಂದು ಹಂತದಲ್ಲಿ ತಮ್ಮದೇ ಆದ ಸ್ವಾಯತ್ತತೆಯನ್ನು ಸ್ಥಾಪಿಸಿ ಜೀವನನ್ನು ಬಂಧಿಸುತ್ತವೆ. ಅಷ್ಟೇ ಅಲ್ಲ ಮನುಷ್ಯನ ಪ್ರಯತ್ನವನ್ನು ಮೀರಿ ಅವನನ್ನು ದುಃಖಪಡಿಸುತ್ತವೆ. ಇವುಗಳನ್ನು ಪರಮಾತ್ಮನೇ ನಿವಾರಣೆ ಮಾಡಬೇಕು. ಅನುಗ್ರಹಿಸಬೇಕು ಎಂಬುದಾಗಿ ತಿಳಿಸಿದ್ದಾರೆ.

ಶ್ರೀ ಭಗವದ್ಗೀತೆಯಲ್ಲಿ ಹೀಗೆ ತಿಳಿಸಲಾಗಿದೆ-

ಶಕ್ನೋತಿ ಹೈವ ಯಃ ಸೋಢುಂ ಪ್ರಾಕ್ ಶರೀರವಿಮೋಕ್ಷಣಾತ್ ।
ಕಾಮಕ್ರೋಧೋದ್ಭವಂ ವೇಗಂ ಸಯುಕ್ತಃ ಸ ಸುಖೀನರಃ ॥ (೫-೨೩)

ಈ ಶರೀರವನ್ನು ತ್ಯಜಿಸುವ ಮೊದಲು ಯಾರು ಈ ಕಾಮಕ್ರೋಧಾದಿಗಳ ವೇಗ ವನ್ನು (ಕ್ರೋಧಾದ್ಭವತಿ ಸಂಮೋಹಃ ಎಂದಿರುವದರಿಂದ) ಸಹಿಸಲು ಸಮರ್ಥರಾಗುವರೋ ಅವರೇ ಸುಖೀ ಪುರುಷರೆನಿಸಿಕೊಳ್ಳುತ್ತಾರೆ. ಆದ್ದರಿಂದ ಇವುಗಳನ್ನು ಹತ್ತಿಕ್ಕಿ ಮೀರಿ ಬರದಂತೆ ನೋಡಿಕೊಳ್ಳುವದು ಪ್ರತಿಯೊಬ್ಬರ ಕರ್ತವ್ಯವಾಗಿದೆ,

ಇನ್ನೊಂದು ಸಂದರ್ಭದಲ್ಲಿ ಆರು ತೆರೆ (ಷಡೂರ್ಮಿ) ಗಳನ್ನು ಹೀಗೆ ಹೇಳಿದ್ದುಂಟು. ಹಸಿವು, ನೀರಡಿಕೆ, ಶೋಕ, ಮೋಹ, ರಾಗ, ದ್ವೇಷ. ಇವು ನಾನಾ ಯೋನಿಯಲ್ಲಿ ಹುಟ್ಟಿ ಬಂದು ಮಾಡಿದ ಅನೇಕ ವಿಪರೀತ ಕರ್ಮಗಳಿಂದ (ವಿರುದ್ಧ ಕರ್ಮಗಳಿಂದ) ಉಂಟಾಗುತ್ತವೆಂದು ತಿಳಿಯಬೇಕು.

ಈ ಷಡೂರ್ಮಿಗಳನ್ನು ದಾಟಿ ಮೇಲೆ ಬರುವದು, ಪಾರಾಗುವದು ಮಹಾ ಕಷ್ಟಕರ ಯಾರಿಂದಲೂ ಆಗದ ಕೆಲಸ. ಇದನ್ನು ಪರಮಾತ್ಮನೊಬ್ಬನೇ ಮಾಡಲು ಸಮರ್ಥ. ಕಾರಣ ಇದರ ನಿವಾರಣೆಗೆ ಪರಮಾತ್ಮನನ್ನು ಮೊರೆ ಹೋಗುವದು ಅವಶ್ಯವಾಗಿದೆ.

ಸತ್ಯವೆಂಬುದೆ ಹುಟ್ಟಂಬಿಗ । ಸದಾ ಭಕ್ತಿಯೆಂಬುದೆ ಪಥವಂಬಿಗ ।
ನಿತ್ಯಮೂರುತಿ ಪುರಂದರವಿಠ್ಠಲ । ನಮ್ಮ ಮುಕ್ತಿ ಮಂಟಪಕೊಯ್ಯೋ
ಅಂಬಿಗ ॥

ಇಲ್ಲಿ ಸತ್ಯವೆಂಬುದೇ ಹುಟ್ಟು (ನಾವೆಯಲ್ಲಿ ಉಪಯೋಗಿಸುವಂತಹದು). ಭಕ್ತಿ ಎಂಬುದೇ ಮಾರ್ಗ. ನಿತ್ಯನಾದ ಆ ಪರಮಾತ್ಮನು ನಮ್ಮ ಭಕ್ತಿಗೆ ಮೆಚ್ಚಿ ಮುಕ್ತಿಯನ್ನು ದಯಪಾಲಿಸುವನೆಂಬುದಾಗಿ ಶ್ರೀದಾಸರು ವಿವರಿಸಿದ್ದಾರೆ.

"ಸತ್ಯಂ ಸ್ವರ್ಗಸ್ಯ ಸೋಪಾನಂ ಪಾರಾವಾರಸ್ಯ ನೌರಿವ" ॥ ಶ್ರೀ ಮಹಾಭಾರತದ ಉಕ್ತಿಯಂತೆ ಸತ್ಯವು ಎಲ್ಲರಿಂದಲೂ ಆನುಷ್ಠಿತವಾಗಬೇಕಾದುದು ಅವಶ್ಯವೇ.

ನಾಸ್ತಿ ಸತ್ಯಸಮೋ ಧರ್ಮೋ ನ ಸತ್ಯಾದ್ವಿದ್ಯತೇ ಪರಮ್ ॥

ಸತ್ಯಕ್ಕೆ ಸಮಾನವಾದ ಧರ್ಮವಿಲ್ಲ. ಸತ್ಯಕ್ಕಿಂತ ಹೆಚ್ಚಿನದು ಇಲ್ಲವೇ ಇಲ್ಲ.

ಸತ್ಯೇನ ಧಾರ್ಯತೇ ಪೃಥ್ವೀ ಸತ್ಯೇನ ತಪತೇ ರವಿಃ ।
ಸತ್ಯೇನ ವಾಯುರ್ವೋ ವಾಂತಿ ಸರ್ವಂ ಸತ್ಯೇ ಪ್ರತಿಷ್ಠಿತಂ ॥ ಶ್ರೀಮಹಾಭಾರತ

ಎಂಬಂತೆ ಈ ಜಗತ್ತಿನಲ್ಲಿ ಎಲ್ಲವೂ ಸತ್ಯದಿಂದಲೇ ನಡೆಯುತ್ತಿದೆ. ಸತ್ಯವೇ ಎಲ್ಲದಕ್ಕೂ ಮೂಲಭೂತವಾದದ್ದು. "ಯತ್ಸತಾಂ ಹಿತಮತ್ಯಂತಂ ತತ್‌ಸತ್ಯಮಿತ್ಯಭಿದೀಯತೇ"- ಯಾವುದರಿಂದ ಸಜ್ಜನರಿಗೆ ಹಿತವಾಗುವದೋ ಅದು ಸತ್ಯವೆಂಬುದು ಶಾಸ್ತ್ರಕಾರರ ಅಭಿಪ್ರಾಯವಾಗಿದೆ.

ಶ್ರೀ ವಾಯುದೇವರಿಗೂ "ಸತ್ಯ"ವೆಂಬ ಹೆಸರಿದೆ. ಮುಕ್ತಿಮಾರ್ಗಕ್ಕೆ ವಾಯುದೇವರು ಹುಟ್ಟಿನಂತೆ ಇದ್ದಾರೆ. ಇವರ ಜೊತೆಯಲ್ಲಿ ವಿರಜಾನದಿಯ ಸ್ನಾನಾನಂತರವೇ ಮೋಕ್ಷವು ದೊರಕುತ್ತದೆ. ಇವರನ್ನು ಹೊಂದಲು ಕೂಡ ಭಕ್ತಿಯು ಅವಶ್ಯವೇ ಆಗಿದೆ.

ಶ್ರೀ ವಾಯುದೇವರು ಸರ್ವರಿಗೂ ಗುರುಗಳಾದ್ದರಿಂದ ಗುರುಭಕ್ತಿ ಮತ್ತು ಭಗವಂತನಲ್ಲಿ ಸುದೃಢವಾದ ಭಕ್ತಿಯು (ಸರ್ವೋತ್ತಮ ಭಕ್ತಿಯು) ಮೋಕ್ಷವನ್ನು ಹೊಂದಬಯಸುವವರಿಗೆ ಅವಶ್ಯವೆಂಬುದು ನಿರ್ವಿವಾದವಾಗಿದೆ.

ಭಗವಂತನು ಭಕ್ತರ ಭಕ್ತಿಗೆ ಮೆಚ್ಚಿ ಮೋಕ್ಷವನ್ನು ಕೊಡತಕ್ಕವನು ಎಂಬುದನ್ನು ಶ್ರೀ ಕೃಷ್ಣನು ಹೀಗೆ ತಿಳಿಸಿದ್ದಾನೆ.

"ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ"

ಗೀತಾ (೧೧-೫೪)

ಮತ್ತು ಭಕ್ತ್ಯೈಕಲಭ್ಯಃ ಪುರುಷೋತ್ತಮೋ ಹಿ ಜಗತ್ ಪ್ರಸೂತಿ ಸ್ಥಿತಿನಾಶಹೇತುಃ। ಎಂದಾಗಿ ಜಿತಂತೇ ಸ್ತೋತ್ರದಲ್ಲಿ ಸ್ತೋತ್ರಮಾಡಿರುವದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು.

—ಕೊನೆಯದಾಗಿ, ಪರಮಾತ್ಮನು ನಿತ್ಯನಾಗಿದ್ದಾನೆ. ಇದನ್ನು "ಓಂ ನಾತ್ಮಾ" ಶ್ರುತೇಃ ನಿತ್ಯತ್ವಾಚ್ಚ ತಾಭ್ಯಃ ಓಂ" ಎಂಬ ಬ್ರಹ್ಮಸೂತ್ರದಲ್ಲಿ ಮತ್ತು "ನಿತ್ಯೋ ನಿತ್ಯಾನಾಂ ಇತ್ಯಾದಿ ಶ್ರುತಿಗಳಲ್ಲಿ ಚೆನ್ನಾಗಿ ಸಮರ್ಥಿಸಿದ್ದಾರೆ.

ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ ।<br>
ಕೈವಲ್ಯದಃ ಪರಂ ಬ್ರಹ್ಮ ವಿಷ್ಣುರೇವ ನ ಸಂಶಯಃ ॥

(ಶ್ರೀ ವಿಷ್ಣುತತ್ವವಿನಿರ್ಣಯ)

ಇತ್ಯಾದಿ ಪ್ರಮಾಣಗಳಿಂದ ಹಾಗೂ "ಅಮೃತಸ್ಯೈವ ಸೇತುಃ" ಎಂಬ ಶ್ರುತಿಯಿಂದ ಮುಕ್ತಿಯನ್ನು ದಯಪಾಲಿಸುವವನು ಪರಮಾತ್ಮನೆಂಬುದು ಖಚಿತವಾಗುತ್ತದೆ.

ಆದ್ದರಿಂದ ಮುಕ್ತಿಪ್ರದನಾದ ಮುಕುಂದನನ್ನು ಸರ್ವರೂ ಸರ್ವಕಾಲಗಳಲ್ಲಿ ಸೇವಿಸಿ ಈ ಸಂಸಾರ ಸಾಗರದಿಂದ ಪಾರಾಗಬೇಕೆಂಬುದು ದಾಸಶ್ರೇಷ್ಠರಾದ ಶ್ರೀ ಪುರಂದರದಾಸರ ಮನೋಭಾವವಾಗಿದೆಯೆಂದು ತಿಳಿಯಬೇಕು.

**ಶ್ರೀ ಮಧ್ವೇಶಾರ್ಪಣಮಸ್ತು**

|| ಶ್ರೀಃ ||

# ನೀ ತಂದೆ ನಾ ಬಂದೆ

ಶ್ರೀ ಪುರಂದರದಾಸರು

ನೀ ತಂದೆ ನಾ ಬಂದೆ ।
ನೀ ಎನ್ನ ತಂದೆ ॥

ಒಂದಲ್ಲ ಎರಡಲ್ಲ ಮೂರಲ್ಲ ನಾಲ್ಕಲ್ಲ
ಎಂಭತ್ತುನಾಲ್ಕು ಲಕ್ಷ ಯೋನಿಗಳಲ್ಲಿ-
ನೀ ತಂದೆ ನಾ ಬಂದೆ ॥ ೧ ॥

ಕಾಮದಲಿ ಎನ್ನ ತಂದೆ ಕ್ರೋಧದಲಿ ಎನ್ನ ತಂದೆ
ಉನ್ಮಾದಾ ಬವಣೆಯಲಿ ನೀ ಎನ್ನ ತಂದೆ
ನೀ ತಂದೆ ನಾ ಬಂದೆ ॥ ೨ ॥

ಹಿಂದೆ ಬರೆದ ಬರಹ ಹ್ಯಾಂಗಾದರಾಗಲಿ
ಮುಂದೆ ಛಂದಾಗಿ ಬರೆಯಯ್ಯ ಪುರಂದರವಿಠಲ
ನೀ ತಂದೆ ನಾ ಬಂದೆ ॥ ೩ ॥

ಇಲ್ಲಿ ಪರಮಾತ್ಮನು ಈ ಜಗತ್ತನ್ನು ಸೃಷ್ಟಿಮಾಡಿ ಜೀವರಿಗೆ ಅವರವರ ಸಾಧನ ಪೂರ್ತಿಗಾಗಿ ಕರುಣೆಯಿಂದ (ಚಕ್ರೇsಥ ದೇಹಸಹಿತಾನ್ ಶ್ರೀ ಮ. ಭಾ. ತಾ. ನಿ.-(೧-೯) ದೇಹವನ್ನು ತಂದು ಕೊಡುತ್ತಾನೆಂಬ ಅಂಶವನ್ನು ದಾಸರಾಯರು ತಿಳಿಸಿದ್ದಾರೆ.

"ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್" (ಗೀತಾ ೯-೭) ಎಂಬ ಉಕ್ತಿಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಜಗತ್ತಿನ ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮೋಕ್ಷಗಳು ಪರಮಾತ್ಮನಿಂದಲೇ ಆಗುತ್ತವೆ.

ಉತ್ಪತ್ತಿ ಸ್ಥಿತಿ ಸಂಹಾರಾ ನಿಯತಿಜ್ಞಾನಮಾಪ್ರೃತೀಃ ।
ಬಂಧಮೋಕ್ಷೌ ಚ ಪುರುಷಾದ್ಯಸ್ಮಾತ್ಸ ಹರಿರೇಕರಾಟ್ ॥
(ಭಾಷ್ಯದಲ್ಲಿ ಸ್ಕಂದ ವಚನ)

ಹಾಗೂ "ಓಂ ಜನ್ಮಾದ್ಯಸ್ಯ ಯತಃ ಓಂ" (೧-೧-೨) ಸೂತ್ರದಲ್ಲಿ ಸೂತ್ರಕಾರರು ಆ ಪರಮಾತ್ಮನೇ ಜೀವರನ್ನು ಸೃಷ್ಟಿಸುತ್ತಾನೆಂಬುದಾಗಿ ಹೇಳಿದ್ದಾರೆ.

"ಯೋ ನಃ ಪಿತಾ ಜನಿತಾ ಯೋ ವಿಧಾತಾ" ಎಂಬ ಶ್ರುತಿ ವಾಕ್ಯದಂತೆ ಹಾಗೂ "ಪಿತಾಸಿ ಲೋಕಸ್ಯ ಚರಾಚರಸ್ಯ" ಎಂಬ ಗೀತಾ (೧೧-೪೩) ಉಕ್ತಿಯಂತೆ ಪರಮಾತ್ಮನು ಜೀವರಿಗೆ "ತಂದೆ" ಯಾಗಿದ್ದಾನೆಂಬುದು ಖಚಿತವೇ.

ಇಂಥ ಪರಮಾತ್ಮನ ಅತ್ಯರ್ಥ ಪ್ರಸಾದವನ್ನು ಭಕ್ತಿಯ ಮೂಲಕ ಸಂಪಾದಿಸಿ ಈ ಸಂಸಾರ ಬಂಧನದಿಂದ ಪಾರಾಗಲು ಪ್ರತಿಯೊಬ್ಬ ಜೀವನು ಪ್ರಯತ್ನಿಸಬೇಕು ಎಂಬುದು ದಾಸಶ್ರೇಷ್ಠರ ಅಭಿಮತ.

ಒಂದಲ್ಲ ಎರಡಲ್ಲ ಮೂರಲ್ಲ ನಾಲ್ಕಲ್ಲ ಎಂಭತ್ತುನಾಲ್ಕು ಲಕ್ಷ ಯೋನಿಗಳಲ್ಲಿ
ನೀ ತಂದೆ ನಾ ಬಂದೆ ॥ ೧ ॥

ಈ ಜೀವರು ಎಂಭತ್ತುನಾಲ್ಕುಲಕ್ಷ ಯೋನಿಗಳಲ್ಲಿ ಹುಟ್ಟಿ ಬರುತ್ತಾರೆ. ೮೪ ಲಕ್ಷ ಯೋನಿಗಳು ಯಾವವು ? ಎಂಬುದನ್ನು ಶ್ರೀ ಪದ್ಮ ಮಹಾಪುರಾಣದಲ್ಲಿ ಹೀಗೆ ತಿಳಿಸಿದ್ದಾರೆ–

ಜಲಜಾಃ ನವಲಕ್ಷಾಸ್ಸ್ಯು ಸ್ಥಾವರಾಃ ಲಕ್ಷವಿಂಶತಿಃ ।
ಕ್ರಿಮಿಜಾಃ ರುದ್ರಸಂಖ್ಯಾಕಶ್ಚ ಪಕ್ಷಿಣಾಂ ದಶಲಕ್ಷಕಂ ।
ತ್ರಿಂಶಲ್ಲಕ್ಷಂ ತು ಪಶ್ವಾದಿ ಚತುರ್ಲಕ್ಷಂ ತು ಮಾನುಷಾಃ ॥

| | | |
|---|---|---|
| ಜಲಜ ಯೋನಿ | ೯ | ಲಕ್ಷ |
| ವೃಕ್ಷಾದಿ .. | ೨೦ | .. |
| ಕ್ರಿಮಿ .. | ೧೧ | .. |
| ಅಂಡಜ .. | ೧೦ | .. |
| ಪಶು .. | ೩೦ | .. |
| ಮಾನುಷ ಯೋನಿ | ೪ | .. |

ಒಟ್ಟು ೮೪ ಲಕ್ಷ ಯೋನಿಗಳು—

ಇನ್ನು ಆಹಾರ ಮರ್ಯಾದೆಯನ್ನು ಗಣನೆಗೆ ತಂದುಕೊಂಡಾಗ ೮೪ ಲಕ್ಷ ಯೋನಿಗಳ ವಿವರ ಹೀಗಿದೆ—

| | | |
|---|---|---|
| ಚಂದ್ರಿಕಾ ಭಕ್ಷಣ | ೨ | ಲಕ್ಷ |
| ಮಾಂಸ ,, | ೧೨ | ,, |
| ಪರ್ಣ ,, | ೭ | ,, |
| ಕಾಷ್ಠ ,, | ೨ | ,, |
| ಮಧು ,, | ೧ | ,, |
| ಅಗ್ನಿ ,, | ೧ | ,, |
| ಜಲ ,, | ೧೨ | ,, |
| ವಾಯು ,, | ೪ | ,, |
| ಕುಣಪ ,, | ೭ | ,, |
| ಅಂಧಕಾರ ,, | ೨೦ | ,, |
| ವ್ರೀಹ್ಯಾದಿ ,, | ೧೬ | ,, |

ಒಟ್ಟು ೮೪ ಲಕ್ಷ ಯೋನಿಗಳು.

ಈ ೮೪ ಲಕ್ಷ ಯೋನಿಗಳನ್ನು ಪರಮಾತ್ಮನು ಸೃಷ್ಟಿಸುವ ಕಾರಣದಿಂದಾಗಿಯೇ ಎಲ್ಲ ಯೋನಿಗಳಲ್ಲಿ ಅವನೇ ತಂದೆಯೂ ಆಗಿದ್ದಾನೆ ಆದ್ದರಿಂದ ಉತ್ತಮವಾದ ಮಾನುಷ ಯೋನಿಯಲ್ಲಿ ಹುಟ್ಟಿದಾಗ ಜೀವರು ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಸಂಪಾದಿಸುವವರಾಗಿ ಸಂಸಾರ ಬಂಧನದಿಂದ ಬಿಡುಗಡೆ ಹೊಂದಲು ಬಯಸಬೇಕಾದುದು ಅವಶ್ಯವೇ ಸರಿ. ಮಾನುಷ ಯೋನಿಯಲ್ಲಿ ಹುಟ್ಟಿ ಬರುವಾಗ ಜೀವನು ಪರಮಾತ್ಮನನ್ನು ಕುರಿತು ಪ್ರಾರ್ಥನೆ ಸಲ್ಲಿಸುತ್ತ ಇನ್ನೊಮ್ಮೆ ಮಾತೃ ಗರ್ಭಕ್ಕೆ ಬರದಂತೆ ಪ್ರಯತ್ನಿಸುವುದಾಗಿ ಶಪಥ ಮಾಡುತ್ತಾನೆ. ನಂತರ ಭೂಮಿಗೆ ಬಿದ್ದೊಡನೆಯೇ ಎಲ್ಲ ದುಃಖ ಪರಂಪರೆಯನ್ನು (ನೂರು ಜನ್ಮಗಳಲ್ಲಿ ಪಟ್ಟ ದುಃಖವನ್ನು) ಮರೆತು ಸಂಸಾರ ಸಾಗರದಲ್ಲಿ ಮುಳುಗಿ ಬಿಡುತ್ತಾನೆ.

ಇದು ಕೆಳಗಿನ ಶ್ರೀಮದ್ಭಾಗವತ ಶ್ಲೋಕಗಳಿಂದ ತಿಳಿದು ಬರುತ್ತದೆ—

ಅಕಲ್ಪಃಸ್ವಾಂಗ ಚೇಷ್ಟಾಯಾಂ ಶಕುಂತ ಇವ ಪಂಜರೇ ।
ತತ್ರ ಲಬ್ಧಸ್ಮೃತಿಃ ದೈವಾತ್ ಕರ್ಮಜನ್ಮಶತೋದ್ಭವಮ್ ।
ಸ್ಮರನ್ ದೀರ್ಘಮನುಷ್ವಾಸಂಗರ್ಭೇ ಕಿಂ ನಾಮ ವಿಂದತೇ ॥ (೩-೩೧-೯)

ದೇಹ್ಯನ್ಯದೇಹವಿವರೇ ಜಠರಾಗ್ನಿನಾ ಸೃ-
ಗ್ವಿಣ್ಮೂತ್ರಕೂಪ ಪತಿತೋ ಭೃಶತಪ್ತದೇಹಃ ।

ಇಚ್ಛನ್ನಿತೋ ವಿವಸಿತುಂ ಗಣಯನ್ ಸ್ವಮಾಸಾನ್
ನಿರ್ವಾಸ್ಯತೇ ಕೃಪಣಧೀರ್ಭವತಾ ಕದಾ ನು ॥ (೩-೩೧-೧೯)

ದೇಹವುಳ್ಳ ಜೀವನು ಮಾತೃ ಗರ್ಭದಲ್ಲಿ (ಪಂಜರದಲ್ಲಿಟ್ಟ ಗಿಳಿಯಂತೆ) ರಕ್ತ, ಕ್ರಿಮಿ, ಮಲಮೂತ್ರಗಳಲ್ಲಿ ಬಿದ್ದಿದ್ದು ಜಠರಾಗ್ನಿಯಿಂದ ಸುಡಲ್ಪಟ್ಟ ದೇಹವುಳ್ಳವನಾಗಿ ಎಂದಿಗೆ ಹೊರಬಿದ್ದೇನು ಎಂಬುದಾಗಿ ಶೋಕ ಗ್ರಸ್ತನಾಗಿ ಮಾಸಗಳನ್ನು ಎಣಿಸುತ್ತಾ ಕಾಲವನ್ನು ನೂಕುತ್ತಾನೆ.

ಕಾಮದಲಿ ಎನ್ನ ತಂದೆ ಕ್ರೋಧದಲಿ ಎನ್ನ ತಂದೆ ।
ಉನ್ಮಾದಾ ಬವಣೆಯಲಿ ನೀ ಎನ್ನ ತಂದೆ ॥ ೨ ॥

ಜೀವನಿಗೆ ಹುಟ್ಟಿನಿಂದಲೇ ಕಾಮ ಕ್ರೋಧಾದಿ ಅರಿಷಡ್ವರ್ಗಗಳು ತಮ್ಮ ಸ್ವಾಯತ್ತತೆಯನ್ನು ಸ್ಥಾಪಿಸಿ ಜೀವರನ್ನು ವ್ಯಥೆಪಡಿಸುತ್ತವೆ. ಕಾಮವು ಪ್ರತಿಯೊಬ್ಬರಲ್ಲಿ ಇರಬೇಕಾದುದು ಅವಶ್ಯ. ಆದರೆ ಅದನ್ನು ವಿಷಯ ಪದಾರ್ಥಗಳಲ್ಲಿ ಹರಿಬಿಡಬಾರದು. ಪರಮಾತ್ಮನ ವಿಷಯದಲ್ಲಿ ಮಾತ್ರ ಇರಬೇಕೆಂಬುದನ್ನು ಧ್ಯಾನದಲ್ಲಿ ಇಡಬೇಕು. ಈ ಹಿನ್ನೆಲೆಯಲ್ಲಿ ಶ್ರೀ ಮಧ್ವಾಚಾರ್ಯರು ತಮ್ಮ ಗೀತಾಭಾಷ್ಯದಲ್ಲಿ "ಅನಿಷಿದ್ಧ ಕಾಮಿತ್ವಂ ಹಿ ಅಕಾಮಿತ್ವಂ" ಎಂದರೆ ಶಾಸ್ತ್ರವಿಹಿತವಲ್ಲದ ಕಾಮನೆಗಳನ್ನು ಬಿಡುವದು ಯೋಗ್ಯವೆಂಬುದಾಗಿ ಟಿಪ್ಪಣಿ ಕೊಡಿಸಿರುವರು. ಇದರಿಂದ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಮಾತ್ರ ಇಚ್ಛಿಸುವದು ಯೋಗ್ಯವೆಂದು ತಿಳಿದುಬರುತ್ತದೆ.

"ಕಾಮ ಏಷ ಕ್ರೋಧ ರಜೋಗುಣ ಸಮುದ್ಭವಃ" ಗೀತಾ (೩-೩೭)

ಎಂಬಂತೆ ಕಾಮವು ರಜೋಗುಣದಿಂದ ಹುಟ್ಟಿರುವದು. ಈ ಕಾಮವು ಮನಸ್ಸಿನಲ್ಲಿ ಇರುವಂತಹದು. ಕ್ರೋಧವು ಬರುವಂತಹದು. ಇಂಥ ಕಾಮನೆಯನ್ನು ಪ್ರಪಂಚದ ಕಡೆಯಿಂದ ಭಗವಂತನ ಕಡೆಗೆ ತಿರುಗಿಸಿ ಬಿಟ್ಟರೆ ಅದು ನಿಷ್ಕಾಮವೆಂದು ಕರೆಸಿಕೊಳ್ಳುತ್ತದೆ, ಅಷ್ಟೇ ಅಲ್ಲ ಕ್ರೋಧವು ಇದರಿಂದಾಗಿ ಹತ್ತಿರವೂ ಸುಳಿಯುವದಿಲ್ಲ.

ಮತ್ತು "ಕಾಮಾತ್ ಕ್ರೋಧೋಭಿಜಾಯತೇ" ಗೀತಾ (೨-೬೨)

ವಾಕ್ಯದಂತೆ ಕಾಮದಿಂದ ಕ್ರೋಧವು ಉತ್ಪನ್ನವಾಗುತ್ತದೆ. ಮೇಲೆ ತಿಳಿಸಿದಂತೆ ಈ ಕಾಮವು ಅನಿಷಿದ್ಧ ಪದಾರ್ಥಗಳಲ್ಲಿ ತೊಡಗುವುದಾದರೆ ಕ್ರೋಧದ ಪ್ರಶ್ನೆಯೇ ಬರುವದಿಲ್ಲವಾದ್ದರಿಂದ ಪರಮಾತ್ಮನೇ ಸತ್ಕರ್ಮಗಳಲ್ಲಿ ಬುದ್ಧಿಯನ್ನಿತ್ತು (ನಿಷ್ಕಾಮ ಕರ್ಮಗಳಲ್ಲಿ) ಪಾಲಿಸಬೇಕು ಹಾಗೂ ತಂದೆಯಂತೆ ಜೀವರನ್ನು ಪೋಷಿಸಬೇಕು ಎನ್ನುತ್ತಾರೆ ದಾಸರು.

"ಉನ್ಮಾದಶ್ಚಿತ್ತವಿಭ್ರಮಃ" ಎಂಬ ಕೋಶದಂತೆ ಮನಸ್ಸಿನ ಅನವಸ್ಥಿತಿಯು "ಉನ್ಮಾದವೆಂದು ಕರೆಸಿಕೊಳ್ಳುತ್ತದೆ. ಈ ಉನ್ಮಾದ ಅಥವಾ ಚಿತ್ತವಿಭ್ರಮವು ಉಂಟಾಗುವ ಬಗೆ ಹೀಗಿದೆ—

ಕ್ರೋಧಾದ್ಭವತಿ ಸಂಮ್ಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ।
ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥ (ಗೀತಾ ೨-೬೩)

ಎಂಬಂತೆ ಕ್ರೋಧದಿಂದ ಅಧರ್ಮ ವಿಷಯಕವಾದ ಇಚ್ಛೆ ಉಂಟಾಗುತ್ತದೆ. ಅಧರ್ಮ ವಿಷಯಕ ಇಚ್ಛೆಯಿಂದ ಶಾಸ್ತ್ರದಲ್ಲಿ ಹೇಳಲ್ಪಟ್ಟ ಧರ್ಮಗಳ ಸ್ಮರಣೆಯು ನಾಶವಾಗುತ್ತದೆ. ಸ್ಮರಣೆಯ ನಾಶದಿಂದ ಅಕಾರ್ಯವನ್ನು ಮಾಡಬಾರದೆಂಬ ಬುದ್ಧಿಯು ನಷ್ಟವಾಗುತ್ತದೆ. ಈ ಬುದ್ಧಿಯ ನಾಶದಿಂದ ಅಧರ್ಮಗಳನ್ನಾಚರಿಸಿ ಜೀವನು ನರಕಾದ್ಯನರ್ಥಗಳನ್ನು ಹೊಂದುತ್ತಾನೆ. ಇಂಥ ಪ್ರಸಂಗದಲ್ಲಿ ಪರಮಾತ್ಮನೇ ತಂದೆಯಂತೆ ರಕ್ಷಿಸಲು ಸಮರ್ಥನಾಗಿದ್ದಾನೆ ಕಾರಣ ಎಲ್ಲ ಜೀವರು ಅವನನ್ನೇ ಶರಣು ಹೊಂದಿ ಸಂಸಾರ ಬಂಧನದಿಂದ ಪಾರಾಗಲು ಯತ್ನಿಸಬೇಕು.

ಹಿಂದೆ ಬರೆದ ಬರಹ ಹ್ಯಾಂಗಾದರಾಗಲಿ
ಮುಂದೆ ಛಂದಾಗಿ ಬರಿಯಯ್ಯ ಪುರಂದರವಿಠಲ ॥ ೩ ॥

ಪರಮಾತ್ಮನು ಜೀವರ ಪೂರ್ವಕರ್ಮಗಳಿಗೆ ಅನುಸಾರವಾಗಿ ಶರೀರಗಳನ್ನು ಕೊಟ್ಟು ಸೃಷ್ಟಿಗೆ ತರುತ್ತಾನೆ. ಪರಮಾತ್ಮನಿಗೆ ವೈಷಮ್ಯಾದಿ ದೋಷಗಳು ಇಲ್ಲ ಮತ್ತು ಇದರಿಂದ ಯಾವ ಪ್ರಯೋಜನವೂ ಇಲ್ಲ. ಜೀವರಲ್ಲಿ ಅಂತಃಕರಣವನ್ನು ಮಾಡಿ ಒಳ್ಳೆಯ ಮಾನುಷಾದಿ ಶರೀರಗಳನ್ನು ಕೊಟ್ಟು ಉದ್ಧಾರಮಾಡುತ್ತಾನೆ.

"ಓಂ ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಮ್ ಓಂ" ಎಂಬ ಸೂತ್ರದಲ್ಲಿ ತಿಳಿಸಿದಂತೆ ಹಿಂದೆ ಮಾಡಿದ ಕರ್ಮಗಳ ಪುಣ್ಯಪಾಪಗಳ ಫಲವನ್ನು ಅನುಭವಿಸಿ ಜೀವನು ಮತ್ತೆ ಈ ಲೋಕದಲ್ಲಿ ಹುಟ್ಟುತ್ತಾನೆ. ಈ ಕಾರಣದಿಂದ ಹಿಂದೆ ಬರೆದ ಬರಹವು ಪೂರ್ವ ಜನ್ಮಗಳಲ್ಲಿ ಕರ್ಮಗಳಿಗೆ ಅನುಗುಣವಾಗಿಯೇ ಇರುವದು ನಿಶ್ಚಿತ. ಆದರೆ ಮುಂದೆ ಮಾತ್ರ ಛಂದಾಗಿ ಬರೆಯಬೇಕೆಂದು ಭಗವಂತನಲ್ಲಿ ಪ್ರಾರ್ಥನೆಯನ್ನು ಪ್ರತಿಯೊಬ್ಬರೂ ಸಲ್ಲಿಸಬೇಕು ಎಂಬುದಾಗಿ ದಾಸರು ಇಲ್ಲಿ ತಿಳಿಸಿದ್ದಾರೆ. ಅಂದರೆ ಜೀವರು ಸೃಷ್ಟಿಗೆ ಬಂದ ಮೇಲೆ ನಿಷ್ಕಾಮ ಕರ್ಮಗಳನ್ನು (ಭಗವತ್ಪೂಜಾರೂಪವಾಗಿ) ಆಚರಿಸಿ ಭಗವಂತನಿಗೆ ಅರ್ಪಿಸಿ, ಭಗವಂತನ ಸರ್ವೋತ್ತಮತ್ವ ಜ್ಞಾನವನ್ನುಹೊಂದಿ ಅತ್ಯರ್ಥ ಪ್ರಸಾದವನ್ನು ಹೊಂದಲು ಯತ್ನಿಸಬೇಕು. ಹೀಗೆ ಮಾಡುವುದರಿಂದ ಶ್ರೀ ಪುರಂದರವಿಠಲನು ಭಕ್ತರನ್ನು ಕಾಪಾಡಿ, ಮೋಕ್ಷವನ್ನು ದಯಪಾಲಿಸುವದು ನಿಶ್ಚಿತವೆಂಬುದಾಗಿ ಶ್ರೀದಾಸರು ಅಭಿಪ್ರಾಯ ಪಟ್ಟಿದ್ದಾರೆ.

**ಶ್ರೀ ಮಧ್ವೇಶಾರ್ಪಣಮಸ್ತು**

॥ ಶ್ರೀಃ ॥

# ಹರಿಕಥಾಶ್ರವಣ ಮಾಡೋ

ಶ್ರೀ ಪುರಂದರದಾಸರು

ಹರಿಕಥಾಶ್ರವಣ ಮಾಡೋ ॥ ಪಾಡೋ ॥

ಹರಿಕಥಾಶ್ರವಣ ಮಾಡೋ ॥ ಪ ॥

ಪಥ ವೈಕುಂಠಕಿದು ನೋಡೋ ॥ ಅ. ಪ. ॥

ಸರಸಿಜನಾಭನ ಸರ್ವದಾ ಹೊಗಳುತ
ದುರಿತ ದೂರಕೀಡಾಡೋ ॥ ೧ ॥

ಜ್ಞಾನ ಭಕುತಿ ವೈರಾಗ್ಯವೀವ ನಮ್ಮ
ಆನಂದತೀರ್ಥರ ಪಾಡೋ ॥ ೨ ॥

ಪರಮ ಪುರುಷ ಶ್ರೀಪುರಂದರವಿಠಲನ
ಚರಣಕಮಲದಲಿ ಕೂಡೋ ॥ ೩ ॥

ಶ್ರೀ ಹರಿಯ ಕಥಾಶ್ರವಣವು ಅತೀ ಅವಶ್ಯವಾದದ್ದು. ಶ್ರವಣೇಂದ್ರಿಯದ ಸಾರ್ಥಕತೆ ಶ್ರೀ ಹರಿಯ ಕಥಾಶ್ರವಣ ಮಾಡಿದರೆ ಮಾತ್ರ ಎಂಬುದನ್ನು ಮರೆಯಬಾಗದು. ಪ್ರಸ್ತುತ ಪದ್ಯದಲ್ಲಿ ಶ್ರೀ ಪುರಂದರದಾಸರು ಈ ಹರಿಕಥಾಶ್ರವಣವು ವೈಕುಂಠವನ್ನು ಕುರಿತು ಹೋಗುವದಕ್ಕೆ ಪ್ರಥಮ ಸೋಪಾನವೆಂಬುದಾಗಿ ವರ್ಣಿಸಿದ್ದಾರೆ—

ಹರಿಕಥಾಶ್ರವಣ ಮಾಡೋ ॥ ಪಾಡೋ ॥

ಹರಿಕಥಾಶ್ರವಣ ಮಾಡೋ ॥ ಪಲ್ಲ ॥

ಪಥ ವೈಕುಂಠಕಿದು ನೋಡೋ ॥ ಅ. ಪ. ॥

ಪ್ರತಿಯೊಬ್ಬ ಜೀವನು ನಿತ್ಯದಲ್ಲಿ ಶ್ರೀ ಹರಿಯ ಕಥಾಶ್ರವಣವನ್ನು ಮತ್ತು ಶ್ರೀ ಹರಿಯ ಗುಣಗಾನವನ್ನು (ಕೀರ್ತನೆಯನ್ನು) ತಪ್ಪದೇ ಮಾಡಬೇಕು. ಇದು ವೈಕುಂಠವನ್ನು ಕುರಿತು ಹೋಗುವದಕ್ಕೆ ಸೋಪಾನವೆಂಬುದಾಗಿ ಶ್ರೀ ದಾಸರು ಇಲ್ಲಿ ತಿಳಿಸಿದ್ದಾರೆ—

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥
ಇತಿ ಪುಂಸಾರ್ಪಿತಾ ವಿಷ್ಣೌ ಭಕ್ತಿಶ್ಚೇನ್ನವಲಕ್ಷಣಾ ।
ಕ್ರಿಯತೆ ಭಗವತ್ಯದ್ಧಾ ತನ್ಮನ್ಯೇಽಧೀತಮುತ್ತಮಮ್ ॥
ಶ್ರೀಮದ್‌ಭಾಗವತ (೭-೫ ೨೩, ೨೪)

ಈ ಉಕ್ತಿಯಂತೆ ಶ್ರೀ ಹರಿಯ ಕಥಾಶ್ರವಣ ಮತ್ತು ಕೀರ್ತನ ಇವೆರಡೂ ಭಕ್ತಿಯ ೯ ಲಕ್ಷಣಗಳಲ್ಲಿ ಅಂತರ್ಗತವಾಗಿವೆಂದು ತಿಳಿಯತಕ್ಕದ್ದು.

ಇಲ್ಲಿ ಶ್ರೀಹರಿಯ ಕಥಾಶ್ರವಣ ಮಾಡಬೇಕು ಎಂದಿದ್ದಾರೆ- ಮೊದಲು ಕಥಾ ಎಂದರೇನು ? ವಿಚಾರಿಸೋಣ—

ಕಥಾ ಎಂದರೆ ಗುಣಪ್ರತಿಪಾದಕ ವಾಗ್ಜಾಲವೆಂದು ಹೇಳಬಹುದು. ಕಾರಣ ಹರಿಕಥಾ ಎಂದರೆ ಶ್ರೀ ಹರಿಯ ಗುಣಗಳನ್ನು ಪ್ರತಿಪಾದಿಸುವ ವಾಕ್‌ಸಮೂಹ ವೆಂದು ಅರ್ಥವಾಗುತ್ತದೆ.

ಈಗ ಶ್ರೀ ಹರಿಯ ಕಥೆಗಳನ್ನೇ ಏಕೆ ಕೇಳಬೇಕು ? ಎಂಬ ಪ್ರಶ್ನೆಗೆ ಶ್ರೀಮದ್ ಭಾಗವತಕಾರರು ಹೀಗೆ ಹೇಳುತ್ತಾರೆ.

ಹರೇಃ ಕಥಾಮೇವ ಕಥಾನುಸಾರಮ್- (೩-೫-೧೫)

ಶ್ರೀ ಹರಿಯ ಕಥೆಯೇ ಕಥೆಗಳಲ್ಲೆಲ್ಲಾ ಸಾರವೆನಿಸಿದೆ-ಶ್ರೇಷ್ಠವೆನಿಸಿದೆ.

ಈ ಸಂಸಾರವೆಂಬ ಕೆಸರನ್ನು ತೊಳೆಯಲು ಶ್ರೀ ಹರಿಕಥಾ ಶ್ರವಣವು ಅವಶ್ಯ ವೆಂದು ಶ್ರೀಮದ್‌ಭಾಗವತಮಾಹಾತ್ಮ್ಯ (ಪದ್ಮ ಪುರಾಣಾಂತರ್ಗತ) ಯಲ್ಲಿ ಹೇಳಿದೆ.

ಸಂಸಾರ ಕರ್ದಮಾಲೇಪ ಪ್ರಕ್ಷಾಲನ ಪಟೀಯಸೀ ।
ಕಥಾತೀರ್ಥೇ ಸ್ಥಿತೇ ಚಿತ್ತೇ ಮುಕ್ತಿರೇವ ಬುಧೈಃ ಸ್ಮೃತಾ ॥ (೫-೬೬)

ಶ್ರೀ ಹರಿಕಥೆಯೆಂಬ ತೀರ್ಥದಲ್ಲಿ ಮನಸ್ಸನ್ನು ಇಟ್ಟವರಿಗೆ ಮುಕ್ತಿದೊರೆಯುತ್ತದೆ. ಇದನ್ನೇ ಶ್ರೀದಾಸರು "ಪಥ ವೈಕುಂಠಕಿದು" ನೋಡೋ ಎಂದಿದ್ದಾರೆ.

ಶ್ರೀ ಹರಿಕಥಾ ಶ್ರವಣದಿಂದಾಗುವ ಲಾಭವನ್ನು ಇನ್ನೂ ವಿವರವಾಗಿ- ಶ್ರೀಮದ್‌ಭಾಗವತದಲ್ಲಿ ಹೀಗೆ ತಿಳಿಸಿದ್ದಾರೆ—

ಪಿಬಂತಿ ಯೇ ಭಗವತ ಆತ್ಮನಃ ಸತಾಂ
ಕಥಾಮೃತಂ ಶ್ರವಣಪುಟೇಷು ಸಂಭೃತಮ್ ।
ಪುನಂತಿ ತೇ ವಿಷಯ ವಿದೂಷಿತಾಶಯಂ
ವ್ರಜಂತಿ ತಚ್ಚರಣಸರೋರುಹಾಂತಿಕಂ ॥ (೨-೨-೩೭)

ಯಾರು ಶ್ರೀಹರಿಯ ಕಥಾಮೃತವನ್ನು ಜ್ಞಾನಭಕ್ತಿ ವಿರಕ್ತ್ಯಾದಿಗಳಿಂದ ಕೂಡಿದ ಸಜ್ಜನರ ಮುಖದಿಂದ ತಮ್ಮ ಕಿವಿಗಳೆಂಬ ಬಟ್ಟಲಿನಲ್ಲಿ ತುಂಬಿಕೊಂಡು ಕುಡಿಯುತ್ತಾರೋ ಅವರು ವಿಷಯ ಭೋಗಗಳಿಂದ ಕಲುಷಿತವಾದ ಅಂತಃಕರಣವನ್ನು ಪರಿಶುದ್ಧಗೊಳಿಸಿಕೊಂಡು ಭಗವಂತನ ಪಾದಕಮಲವನ್ನು (ವೈಕುಂಠವನ್ನು) ಹೊಂದುತ್ತಾರೆ. ಮತ್ತು—

ಜ್ಞಾನಂ ಯದಾ ಪ್ರತಿನಿವೃತ್ತಗುಣೋರ್ಮಿಚಕ್ರ
ಮಾತ್ಮ ಪ್ರಸಾದ ಉಭಯತ್ರಗುಣೇಷ್ವಸಂಗಃ ।
ಕೈವಲ್ಯ ಸಂಭೃತ ಪಥ ಸ್ತ್ವಥ ಭಕ್ತಿಯೋಗಃ
ಕೋ ನಿರ್ವೃತೋ ಹರಿಕಥಾಸುರತಿಂ ನ ಕುರ್ಯಾತ್ ॥ (೨-೩-೧೨)

ಶ್ರೀಪರಮಾತ್ಮನ ಕಥೆಗಳನ್ನು ಕೇಳುವುದರಿಂದ ಮೊದಲು ಮನಃಪ್ರಸನ್ನತೆ, ಇಹ-ಪರ ಲೋಕಗಳ ಸುಖದಲ್ಲಿ ವಿರಕ್ತಿ, ಹಸಿವು, ನೀರಡಿಕೆ ಶೋಕ, ಮೋಹ, ರಾಗ ಮತ್ತು ದ್ವೇಷ ಎಂಬ ಷಡೂರ್ಮಿ ಬಾಧೆಗಳನ್ನು ಉಪಶಾಂತಿಯನ್ನುಂಟು ಮಾಡುವ ಜ್ಞಾನವು ನಂತರ ಮೋಕ್ಷಕ್ಕೆ ನಿರ್ಭಯ ಮಾರ್ಗವಾಗಿರುವ ಭಕ್ತಿಯೋಗವು ಸುಲಭವಾಗಿ ದೊರೆಯುತ್ತದೆ. ಇಂಥ ಹರಿಕಥೆಯನ್ನು ಶ್ರವಣ ಮಾಡುವವರಲ್ಲಿ ಯಾರು ಆಸಕ್ತಿಯನ್ನು ಹೊಂದದೇ ಇರುತ್ತಾರೆ ? ಅವಶ್ಯವಾಗಿ ಆಸಕ್ತಿಯನ್ನು ಹೊಂದುತ್ತಾರೆಂದು ಭಾವ. ಅಲ್ಲದೇ—

ಶೃಣ್ವನ್ ಗೃಣನ್ ಸಂಸ್ಮರಯಂಶ್ಚ ಚಿಂತಯನ್
ನಾಮಾನಿ ರೂಪಾಣಿ ಚ ಮಂಗಲಾನಿ ತೇ ।
ಕ್ರಿಯಾಸು ಯಸ್ತ್ವಚ್ಚರಣಾರವಿಂದಯೋಃ
ಆವಿಷ್ಟಚಿತ್ತೋ ನ ಭವಾಯ ಕಲ್ಪತೇ ॥ (೧೦-೨-೩೭)

ಭಗವಂತನ ಪವಿತ್ರನಾಮಗಳನ್ನು ಕೇಳುತ್ತ, ಉಚ್ಚರಿಸುತ್ತ, ಮಂಗಳ ರೂಪವನ್ನು ಸ್ಮರಿಸುತ್ತ ನಿತ್ಯಕರ್ಮಗಳನ್ನು ಆಚರಿಸುತ್ತ ಪರಮಾತ್ಮನ ಪಾದಾರವಿಂದಗಳಲ್ಲಿ ಇಡಲ್ಪಟ್ಟ ಮನಸ್ಸುಳ್ಳವರು ಸಂಸಾರ ಬಂಧನಕ್ಕೆ ಒಳಗಾಗುವದಿಲ್ಲ.

ಈ ಕಾರಣಗಳಿಂದ ಶ್ರೀ ಪುರಂದರದಾಸರು ಪರಮಾತ್ಮನ ಕಥೆಗಳ ಶ್ರವಣವು ವೈಕುಂಠಕ್ಕೆ ಸೋಪಾನವೆಂಬುದಾಗಿ ತಿಳಿಸಿದ್ದಾರೆ.

ಸರಸಿಜನಾಭನ ಸರ್ವದಾ ಹೊಗಳುತ
ದುರಿತ ದೂರಕೀಡಾಡೋ ॥೧॥

ಪದ್ಮನಾಭನೆನಿಸಿದ ಭಗವಂತನನ್ನು ಎಲ್ಲ ಕಾಲಗಳಲ್ಲಿ ಕೀರ್ತನೆ ಮಾಡುತ್ತಿದ್ದರೆ- ಎಲ್ಲ ಪಾಪಗಳು ತಾವಾಗಿಯೇ ನಾಶವಾಗುತ್ತವೆ. ಮತ್ತು ದೂರವಾಗುತ್ತವೆಂಬುದು ನಿಶ್ಚಿತವೆಂದು ತಿಳಿಸುತ್ತಾರೆ.

ಶ್ರೀಹರಿಯು ಸರಸಿಜನಾಭ (ಪದ್ಮನಾಭ) ನೆಂಬುದನ್ನು ಕೆಳಗಿನ ಶ್ಲೋಕದಿಂದ ತಿಳಿಯಬಹುದು.

ಶ್ರೀ ಪದ್ಮನಾಭ ಪದ್ಮೇಶ ಪದ್ಮಜೇಶೇಂದ್ರವಂದಿತ ।
ಪದ್ಮಮಾಲಿನ್ ಪದ್ಮನೇತ್ರ ಪದ್ಮಾಭಯ ದೂರಿಭೃತ್ ॥
(ಆದಿತ್ಯಪುರಾಣ ವೆಂ. ಮಾ. ೧-೪೫)

ಇದನ್ನೇ ಶ್ರೀಮದ್‌ಭಾಗವತದಲ್ಲಿ ಹೀಗೆ ವರ್ಣಿಸಿದ್ದಾರೆ.

ನಮಃ ಪಂಕಜನಾಭಾಯ ನಮಃ ಪಂಕಜಮಾಲಿನೇ ।
ನಮಃ ಪಂಕಜನೇತ್ರಾಯ ನಮಸ್ತೇ ಪಂಕಜಾಂಘ್ರಯೇ ॥ (೧೦-೫೯-೨೬)

ಶ್ರೀ ಹರಿಕೀರ್ತನೆಯು ಸರ್ವಪಾಪಗಳನ್ನು ನಾಶಗೊಳಿಸುತ್ತದೆಂಬ ವಿಷಯವು ಹೀಗೆ ತಿಳಿದುಬರುತ್ತದೆ—

ಯನ್ನಾಮಕೀರ್ತನಂ ಭಕ್ತ್ಯಾ ವಿಲಾಪನಮನುತ್ತಮಮ್ ।
ಮೈತ್ರೇಯಾಶೇಷಪಾಪಾನಾಂ ಧಾತೂನಾಮಿವ ಪಾವಕಃ ॥
ಶ್ರೀ ವಿಷ್ಣುಪುರಾಣ (೬ ೮-೨೦)

ಲೋಹಗಳು ಬೆಂಕಿಯಿಂದ ಕರಗಿ ಹೋಗುವಂತೆ ಭಕ್ತಿಯಿಂದ ಮಾಡಿದ ಭಗವನ್ನಾಮ ಕೀರ್ತನೆಯು ಸಕಲ ಪಾಪಗಳನ್ನು ಕರಗಿಸಿ ಬಿಡುತ್ತದೆ.

ಇದನ್ನೇ ಶ್ರೀಮದ್‌ಭಾಗವತದಲ್ಲಿ ಹೀಗೆ ತಿಳಿಸಿದ್ದಾರೆ—

ಯತ್ಕೀರ್ತನಂ ಯಚ್ಛ್ರವಣಂ ಯದೀಕ್ಷಣಂ
ಯದ್ವಂದನಂ ಯತ್‌ಸ್ಮರಣಂ ಯದರ್ಹಣಮ್ ।
ಲೋಕಸ್ಯ ಸದ್ಯೋ ವಿಧುನೋತಿ ಕಲ್ಮಷಂ
ತಸ್ಮೈ ಸುಭದ್ರಶ್ರವಸೇ ನಮೋ ನಮಃ ॥ (೨-೪-೧೫)

ಯಾರು ಭಗವಂತನ ಕೀರ್ತನೆ, ಸ್ಮರಣೆ. ದರ್ಶನ, ವಂದನೆ, ಮಹಿಮಾ ಶ್ರವಣ ಪೂಜಾದಿಗಳನ್ನು ಭಕ್ತಿಪೂರ್ವಕ ಮಾಡುವರೋ ಅವರ ಸಮಸ್ತ ಪಾಪಗಳು ತತ್ ಕ್ಷಣದಲ್ಲಿ ನಾಶವಾಗುತ್ತವೆ.

ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಸಜ್ಜನರು ತನ್ನ ಉಪಾಸನೆ ಮಾಡುವ ಬಗೆಯನ್ನು ತಿಳಿಸಿರುವದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು—

ಸತತಂ ಕೀರ್ತಯಂತೋ ಮಾಂ ಯತಂತಶ್ಚ ಧೃಡವ್ರತಾಃ ।
ನಮಸ್ಯಂತಶ್ಚ ಮಾಂ ಭಕ್ತ್ಯಾನಿತ್ಯಯುಕ್ತಾ ಉಪಾಸತೆ ॥ (೯–೧೪)

ಒಟ್ಟಿನಲ್ಲಿ ಸರ್ವದಾ ಭಗವಂತನ ಉಪಾಸನೆಯನ್ನು ಮಾಡುವವರ ಪಾಪಗಳು ನಾಶಹೊಂದುವದು ನಿಶ್ಚಿತವು.

ಜ್ಞಾನಭಕುತಿ ವೈರಾಗ್ಯವೀವ ನಮ್ಮ
ಆನಂದತೀರ್ಥರ ಪಾಡೋ ॥ ೨ ॥

ಪ್ರತಿಯೊಬ್ಬ ಜೀವನು ಜ್ಞಾನ ಭಕ್ತಿ ವೈರಾಗ್ಯಗಳನ್ನು ಕೊಡಲು ಸಮರ್ಥರಾದ ಶ್ರೀಮದಾನಂದತೀರ್ಥರನ್ನು ಕೊಂಡಾಡಬೇಕು.

ಶ್ರೀಹರಿಯ ಮಾಹಾತ್ಮ್ಯಜ್ಞಾನ, ಶ್ರೀಹರಿಯಲ್ಲಿ ಏಕಾಂತ ಭಕ್ತಿ ಮತ್ತು ವೈಷಯಿಕ ಸುಖಗಳಲ್ಲಿ ವೈರಾಗ್ಯ ಇವು ಸರ್ವರಿಗೂ ಅವಶ್ಯವೆನಿಸಿವೆ. ಇವುಗಳಿಗೆ "ಸಾಧನತ್ರಯ" ಗಳೆಂದು ಕರೆಯುತ್ತಾರೆ. ಇವುಗಳನ್ನು ಯೋಗ್ಯರಾದ ಜೀವರಿಗೆ ಕೊಡುವವರು, ಭಗವಂತನ ಪರಮ ಪ್ರೀತಿಗೆ ಪಾತ್ರರಾದ ಶ್ರೀಮದಾನಂದತೀರ್ಥರು (ಪರಮಾತ್ಮನ ಸಂಕಲ್ಪಾನುಸಾರ ಕೊಡುವವರು) ಕಾರಣ ಇವರ ಅನುಗ್ರಹವನ್ನು ಪಡೆಯಲು ಪ್ರತಿಯೊಬ್ಬರೂ ಪ್ರಯತ್ನಿಸಬೇಕು.

ಶ್ರೀ ಸರಸಭಾರತೀ ವಿಲಾಸವೆಂಬ ಗ್ರಂಥದಲ್ಲಿ ಶ್ರೀವಾದಿರಾಜರು ಶ್ರೀಮದಾನಂದತೀರ್ಥರನ್ನು ಕುರಿತು ಹೀಗೆ ಪ್ರಾರ್ಥಿಸಿದ್ದಾರೆ.

ಭಕ್ತಿರ್ಹರೌ ಪ್ರಸಕ್ತಿಶ್ಚ ಸತ್ಸ್ವಸ್ತು ಸ್ಫೂರ್ತಿರೇವಚ ।
ವಿರಕ್ತಿಶ್ಚ ವಿಮುಕ್ತಿಶ್ಚ ಮೇಽಸ್ತು ಯುಷ್ಮದನುಗ್ರಹಾತ್ ॥ (೨–೫೦)

ಶ್ರೀಹರಿಯಲ್ಲಿ ಭಕ್ತಿಯು ಸಜ್ಜನರಲ್ಲಿ ಉತ್ತಮವಾದ ಸಂಗವು, ಜ್ಞಾನಸ್ಫೂರ್ತಿಯು, ವೈರಾಗ್ಯವು ಉತ್ತಮವಾದ ಮುಕ್ತಿಯು ನಿಮ್ಮ ಅನುಗ್ರಹದಿಂದ ನನಗೆ ಆಗಲಿ.

"ಪೂರ್ಣಪ್ರಜ್ಞೋ ಜ್ಞಾನದಾತಾ" ಎಂಬುದನ್ನು ಕೂಡ ಇಲ್ಲಿ ಸ್ಮರಿಸಬಹುದು.

ಆನಂದತೀರ್ಥ ಸನ್ನಾಮ್ನಾಂ ಏವಂ ದ್ವಾದಶಕಂ ಜಪೇತ್ ।
ಲಭತೇ ವೈಷ್ಣವೀಂ ಭಕ್ತಿಂ ಗುರುಭಕ್ತಿ ಸಮನ್ವಿತಾಂ ॥

ಈ ಉಕ್ತಿಯಂತೆ ಪೂರ್ಣಪ್ರಜ್ಞ ಇತ್ಯಾದಿಯಾಗಿ ಹನ್ನೆರಡು ಆನಂದತೀರ್ಥರ ಹೆಸರುಗಳನ್ನು ಸ್ಮರಿಸುವವರು ಜ್ಞಾನ ಭಕ್ತ್ಯಾದಿಗಳನ್ನು ಹೊಂದುವದು ನಿಶ್ಚಿತ. ಇದನ್ನೇ ದಾಸರು ಮೇಲಿನ ಪದ್ಯಭಾಗದಲ್ಲಿ ತಿಳಿಸಿದ್ದಾರೆ.

ಪರಮಪುರುಷ ಶ್ರೀ ಪುರಂದರವಿಠಲನ
ಚರಣ ಕಮಲದಲಿ ಕೂಡೋ ॥ ೩ ॥

ಮೇಲೆ ತಿಳಿಸಿದಂತೆ- ಶ್ರೀಹರಿಯ ಕಥಾಶ್ರವಣವನ್ನು ಮಾಡಿದಲ್ಲಿ ಪಾಪಗಳೆಲ್ಲವನ್ನು ಕಳೆದುಕೊಂಡು ಜ್ಞಾನಭಕ್ತ್ಯಾದಿಗಳನ್ನು ಪಡೆದುಕೊಂಡು ಪುರುಷಶ್ರೇಷ್ಠನಾದ ಶ್ರೀ ಪುರಂದರವಿಠಲನ ಪಾದಕಮಲಗಳನ್ನು ಹೊಂದುವದು ಸಾಧ್ಯವೆಂದು ಶ್ರೀ ದಾಸರು ಇಲ್ಲಿ ಹೇಳುತ್ತಾರೆ.

ಭಗವಂತನೇ ಪುರುಷಶ್ರೇಷ್ಠನೆಂಬ ವಿಷಯವನ್ನು ಶ್ರೀ ಭಗವದ್ಗೀತೆಯಲ್ಲಿ ಹೀಗೆ ತಿಳಿಸಲಾಗಿದೆ-

ದ್ವಾವಿಮೌ ಪುರುಷೌಲೋಕೇ ಕ್ಷರಶ್ಚಾಕ್ಷರ ಏವಚ ।
ಕ್ಷರಃ ಸರ್ವಾಣಿಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ (೧೫-೧೬)
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ (೧೫-೧೭)
ಯಸ್ಮಾತ್ಕ್ಷರ ಮತೀತೋಽಹಂ ಅಕ್ಷರಾದಪಿ ಚೋತ್ತಮಃ ।
ಅತೋಽಸ್ಮಿಲೋಕೇ ವೇದೇಚ ಪ್ರಥಿತಃ ಪುರುಷೋತ್ತಮಃ ॥ (೧೫-೧೮)

ಈ ಲೋಕದಲ್ಲಿ ಕ್ಷರ ಮತ್ತು ಅಕ್ಷರ ಎಂಬ ಪ್ರಮಾಣಸಿದ್ಧರಾದ ಪುರುಷರು (ಚೇತನರು) ಎರಡು ವಿಧ. ಚತುರ್ಮುಖಾದಿ ಸಮಸ್ತ ಜೀವರು ಕ್ಷರವೆಂದು ಹೇಳಲ್ಪಡುತ್ತಾರೆ (ದೇಹ ನಾಶವುಳ್ಳವರಾದ್ದರಿಂದ). ಲಕ್ಷ್ಮೀದೇವಿಯು ನಾಶರಹಿತ ದೇಹವುಳ್ಳವಳಾದ್ದರಿಂದ ಅಕ್ಷರಳೆಂದು ಹೇಳಲ್ಪಡುತ್ತಾಳೆ. ಉತ್ತಮ ಪುರುಷನಾದ ಶ್ರೀ ಹರಿಯು ಕ್ಷರಾಕ್ಷರ ಪುರುಷರಿಗಿಂತ ಭಿನ್ನನು. ಯಾರು ಮೂರು ಲೋಕಗಳನ್ನು ಪ್ರವೇಶಿಸಿ ರಕ್ಷಿಸುತ್ತಾನೋ ಆತನು ನಾಶರಹಿತನು ಮತ್ತು ನಾಶವಿಲ್ಲದಿರುವ ಶಕ್ತಿಯುಳ್ಳ ನಾರಾಯಣನು. ಯಾವ ಕಾರಣದಿಂದ ಕ್ಷರಪ್ರಾಣಿಗಳನ್ನು ಮೀರಿದವನೋ ಹಾಗೂ ಲಕ್ಷ್ಮೀದೇವಿಗಿಂತಲೂ ಉತ್ತಮನೋ ಆ ಕಾರಣದಿಂದ ಪೌರುಷೇಯಗಳಾದ ಭಾರತಾದಿಗಳಲ್ಲಿ ಮತ್ತು ಅಪೌರುಷೇಯವಾದ ವೇದಗಳಲ್ಲಿ "ಪುರುಷೋತ್ತಮ" (ಪುರುಷಶ್ರೇಷ್ಠ) ನೆಂದು ಶ್ರೀ ಹರಿಯು ಪ್ರಸಿದ್ಧನಾಗಿರುತ್ತಾನೆ.

ಶ್ರೀಮದ್‌ಭಾಗವತದಲ್ಲಿ ಭಗವಂತನನ್ನು "ಪರಂ ಪರಮಪೂರುಷಃ॥ (೧೦-೮೭-೪೪) ಎಂದಾಗಿ ಸ್ತುತಿಸಿದ್ದನ್ನು ಇಲ್ಲಿ ಸ್ಮರಿಸಬಹುದು.

ಈ ಪರಮ ಪುರುಷನಾದ ಶ್ರೀ ಹರಿಯನ್ನು ಪೂಜಿಸಿದಲ್ಲಿ ಮೋಕ್ಷವು ದೊರಕುವದು ನಿಶ್ಚಿತವೆಂದು ಶ್ರೀಮದ್ ಭಾಗವತದಲ್ಲಿ ಹೀಗೆ ತಿಳಿಸುತ್ತಾರೆ.

ಅಕಾಮಃ ಸರ್ವಕಾಮೋ ವಾ ಮೋಕ್ಷಕಾಮ ಉದಾರಧೀಃ ।
ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಂ ॥ (೨-೩-೧೦)

ಒಟ್ಟನಲ್ಲಿ ಶ್ರೀ ಹರಿಕಥಾಶ್ರವಣವು, ಶ್ರೀಹರಿಕಥಾ ಕೀರ್ತನೆಯು ಮೋಕ್ಷ ಪಡೆಯಲು ಸೋಪಾನವೆನಿಸಿರುವದರಲ್ಲಿ ಸಂದೇಹವಿಲ್ಲ ಎಂಬುದಾಗಿ ಶ್ರೀ ಪುರಂದರ ದಾಸರು ಚೆನ್ನಾಗಿ ವಿವರಿಸಿರುವದು ಗಮನಾರ್ಹವಾಗಿದೆ.

**ಶ್ರೀ ಮಧ್ವೇಶಾರ್ಪಣಮಸ್ತು**

|| ಶ್ರೀಃ ||

# ಮಾನವ ಜನ್ಮ ದೊಡ್ಡದು

ಶ್ರೀ ಪುರಂದರದಾಸರು

ಮಾನವ ಜನ್ಮ ದೊಡ್ಡದು ಇದ
ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ || ಪ ||

ಕಣ್ಣು ಕೈಕಾಲ್ ಕಿವಿ ನಾಲಿಗೆ ಇರಲಿಕ್ಕೆ
ಮಣ್ಣುಮುಕ್ಕಿ ಮರುಳಾಗುವರೆ
ಹೆಣ್ಣುಮಣ್ಣಿಗಾಗಿ ಹರಿಯ ನಾಮಾಮೃತ
ಉಣ್ಣದೇ ಉಪವಾಸ ಇರುವರೇ ಖೋಡಿ || ೧ ||

ಕಾಲನದೂತರು ಕಾಲ್ ಪಿಡಿದೆಳೆವಾಗ
ತಾಳು ತಾಳೆಂದರೆ ತಾಳುವರೆ
ದಾಳಿಬಾರದ ಮುನ್ನ ಧರ್ಮವ ಗಳಿಸಿರೋ
ಸುಳ್ಳಿನ ಸಂಸಾರ ಸುಳಿಗೆ ಸಿಕ್ಕಲು ಬೇಡಿ || ೨ ||

ಏನು ಕಾರಣ ಯದುಪತಿಯನು ಮರೆತಿರಿ
ಧನಧಾನ್ಯ ಸತಿಸುತರು ಕಾಯುವರೆ
ಇನ್ನಾದರೂ ಏಕೋಭಾವದಿ ಭಜಿಸಿರೋ
ಚೆನ್ನ ಶ್ರೀ ಪುರಂದರವಿಠಲರಾಯನ || ೩ ||

ಪ್ರಸ್ತುತ ಪದ್ಯದಲ್ಲಿ ಶ್ರೀ ಪುರಂದರದಾಸರು ಮಾನವ ಜನ್ಮದ ಮಹತಿಯನ್ನು ವಿವರಿಸುತ್ತ, ಮಾನವರ ನಡತೆ ರೀತಿನೀತಿಗಳನ್ನು ಚೆನ್ನಾಗಿ ನಿರೂಪಿಸಿದ್ದಾರೆ.

ಮಾನವ ಜನ್ಮ ದೊಡ್ಡದು ಇದ
ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ || ಪ ||

ಮಾನವ ಜನ್ಮ ದೊರಕುವದು ಅತಿ ದುರ್ಲಭ ಮತ್ತು ಅಷ್ಟೇ ಮಹತ್ವಪೂರ್ಣವೂ ಹೌದು. ಅದು ದೊರೆತಾಗ ಹಾನಿಮಾಡಿಕೊಳ್ಳದೇ ಪರಮಾತ್ಮನ ಅನುಗ್ರಹ ಸಂಪಾದನೆ ಮಾಡಿಕೊಳ್ಳಬೇಕು ಎಂಬುದಾಗಿ ಶ್ರೀ ಪುರಂದರದಾಸರು ಇಲ್ಲಿ ಸಮಸ್ತ ಮಾನವ ಜನಾಂಗಕ್ಕೆ ಎಚ್ಚರಿಕೆ ನೀಡಿದ್ದಾರೆ.

ಮೊದಲನೆಯದಾಗಿ "ಮನು"ಅವಬೋಧನೇ ಎಂಬ ಧಾತುವಿನಿಂದ 'ಮಾನವ' ಶಬ್ದವು ನಿಷ್ಪನ್ನವಾಗಿದೆ. ಪರಮಾತ್ಮನನ್ನು ತಿಳಿದುಕೊಳ್ಳುವ ಬುದ್ಧಿಸಾಮರ್ಥ್ಯ ವನ್ನು ಹೊಂದಿರುವುದರಿಂದ ಮಾನವನು ಇತರ ಸಕಲ ಪ್ರಾಣಿಗಳಿಗಿಂತ ಶ್ರೇಷ್ಠತೆ ಯನ್ನು ಪಡೆದಿದ್ದಾನೆ. ಅಂತೆಯೇ ಈ ಮಾನವ ಜನ್ಮವು ಕೂಡ ಶ್ರೇಷ್ಠತ್ವವನ್ನು ಹೊಂದಿದೆ.

ಈಗ ಮಾನವ ಜನ್ಮದ ವೈಶಿಷ್ಟ್ಯವೇನೆಂಬುದನ್ನು ತಿಳಿಯಲು ಪ್ರಯತ್ನಿಸುವಾ-

ಸಹಿ ಪ್ರಜ್ಞಾನೇನ ಸಂಪನ್ನತಮಃ । ವಿಜ್ಞಾತಂ ವದತಿ । ವಿಜ್ಞಾತಂ ಪಶ್ಯತಿ ।
ವೇದ ಶ್ವಸ್ತನಂ । ವೇದಲೋಕಾ-ಲೋಕಂ । ಮರ್ತೇನ ಅಮೃತಮೀಪ್ಸತಿ ।
ಅಥಾನ್ಯೇಷಾಂ ಪಶೂನಾಂ ಅಶನಾಯಾ ಪಿಪಾಸೇ ಏವ ಅಭಿವಿಜ್ಞಾನಂ ॥

ಉಳಿದ ಪ್ರಾಣಿಗಳಿಗಿಂತ ಮನುಷ್ಯ ಬೌದ್ಧಿಕವಾಗಿ ಸಿರಿವಂತನಾಗಿದ್ದಾನೆ. ಅವನು ವಿಚಾರಮಾಡಿ ಮಾತಾಡುತ್ತಾನೆ. ಆಲೋಚಿಸುತ್ತಾನೆ. ನಾಳೆಯ ಅರಿವಿದೆ. ಲೋಕಾ ಲೋಕಗಳನ್ನು ತಿಳಿದಿದ್ದಾನೆ. ನಶ್ವರದಿಂದ ಶಾಶ್ವತ ಲೋಕವನ್ನು ಬಯಸುತ್ತಾನೆ. ಆದರೆ ಉಳಿದ ಪಶುಪ್ರಾಣಿಗಳಿಗೆ ಮಾತ್ರ ತಿಂದುಕುಡಿದು ತೃಪ್ತಿಪಡುವುದರಲ್ಲೇ- ಯೋಚನೆ ಎಂಬುದಾಗಿ ಉಪನಿಷತ್ತಿನಲ್ಲಿ ಹೇಳಲಾಗಿದೆ.

ಇದನ್ನೇ ಸುಭಾಷಿತವೊಂದು ಹೀಗೆ ತಿಳಿಸುತ್ತದೆ.

ಆಹಾರ ನಿದ್ರಾಭಯ ಮೈಥುನಾನಿ ಸಮಾನ ಮೇತತ್ ಪಶುಭಿರ್ನರಾಣಾಮ್।
ಏಕೋ ವಿವೇಕೋ ಹ್ಯಧಿಕೋ ಮನುಷ್ಯಂ ತೇನೈವ ಹೀನಃ ಪಶುಭಿಃ ಸಮಾನಃ॥

ಶ್ರೀ ವೇದವ್ಯಾಸರು ಈ ಮಾನವ ಸೃಷ್ಟಿಯ ಉದ್ದೇಶ ವೈಶಿಷ್ಟ್ಯಗಳ- ಬಗೆಗೆ ಶ್ರೀಮದ್‌ಭಾಗವತದಲ್ಲಿ ಹೀಗೆ ತಿಳಿಸಿದ್ದಾರೆ.

ಬಹ್ವ್ಯಃ ಸಂತಿ ಪುರಃ ಸೃಷ್ಟಾಸ್ತಾಸಾಂ ಮೇ ಮಾನುಷೀಪ್ರಿಯಾ । (೧೧-೭-೨೨)
ಅತ್ರಮಾಂ ಮಾರ್ಗಯಂತ್ಯದ್ಧಾ ಯುಕ್ತಾಹೇತುಭಿರೀಶ್ವರಮ್ ॥ (೧೧-೭-೨೩)

"ನನ್ನ ಸೃಷ್ಟಿಯಲ್ಲಿ ಮಾನವ ಸೃಷ್ಟಿಯು ನನಗೆ ಪ್ರಿಯವಾದುದು. ಕಾರಣವೆಂದರೆ- ಈ ಮಾನವ ಸೃಷ್ಟಿ ತನ್ನ ಸೃಷ್ಟಿಕರ್ತನನ್ನು ಅನ್ವೇಷಿಸುತ್ತದೆ.

ಹಿಂದಕ್ಕೆ ಶ್ರೀಹರಿಯಿಂದ ಸೃಷ್ಟರಾದ ದೇವತೆಗಳು ತಮಗೆ ಆಶ್ರಯ ಸ್ಥಾನ ವನ್ನು ಕೊಡುವಂತೆ ಪ್ರಾರ್ಥಿಸಿದರು.

ಶ್ರೀ ಹರಿಯು ಕುದುರೆಯನ್ನು ತೋರಿಸಿದ; ದೇವತೆಗಳು ಸಾಲದೆಂದರು. ಹಸುವನ್ನು ತೋರಿಸಿದ. ಅದೂ ಸಾಲದೆಂದರು. ನಂತರ "ತಾಭ್ಯಃ ಪುರುಷ ಮಾನೆ ಯತ ತಾ ಅಬ್ರುವನ್ ಸುಕೃತಂ ಬತೇತಿ"— ಎಂಬಂತೆ ಮನುಷ್ಯನನ್ನು ತೋರಿಸಿದ,

ಎಲ್ಲರೂ ಒಪ್ಪಿಕೊಂಡರು. ಹಾಗೂ ಅದರಲ್ಲಿ ಪ್ರವೇಶಿಸಿದರು. ಹೀಗೆ ಮನುಷ್ಯ ಶರೀರವು ಸಕಲ ದೇವತೆಗಳ ಆಶ್ರಯುವೆನಿಸಿತು.

ಮನುಷ್ಯ ಶರೀರವು "ಅಮೃತತ್ವ" ವನ್ನು ಪಡೆಯಲು ಪರಮಸಾಧನವೆನಿಸಿದೆ. ಇದನ್ನೇ "ದುರ್ಲಭಂ ಮಾನುಷಂಜನ್ಮತದಪ್ಯಧ್ರುವಮರ್ಥದಮ್" ಎಂಬುದಾಗಿ ಶ್ರೀಪ್ರಹ್ಲಾದರಾಜರು ಹೇಳಿದ್ದಾರೆ.

ಇಂಥ ಉತ್ತಮವಾದ ಮಾನವ ಜನ್ಮವನ್ನು ಪಡೆದವನಾಗಿ- "ಮೋಕ್ಷ" ಕ್ಕಾಗಿ ಪ್ರಯತ್ನಿಸದಿರುವವರನ್ನು ಕಂಡು ಶ್ರೀ ಪುರಂದರದಾಸರು ಈ ಜನ್ಮ ದೊಡ್ಡದು- ಹಾನಿ ಮಾಡಿಕೊಳ್ಳಬೇಡಿ ಎಂದಿದ್ದಾರೆ.

ಇಲ್ಲಿ "ಹಾನಿ" ಎಂದರೆ ಯಾವುದು ? ಶ್ರೀಮದಾಚಾರ್ಯರು ಶ್ರೀ ಕೃಷ್ಣಾಮೃತ ಮಹಾರ್ಣವ ಗ್ರಂಥದಲ್ಲಿ ಹೀಗೆ ಅಪ್ಪಣೆ ಕೊಡಿಸಿದ್ದಾರೆ.

ಸಾ ಹಾನಿಃ ತನ್ಮಹಚ್ಛಿದ್ರಂ ಸಾಚಾಂಧ ಜಡಮೂಕತಾ ।
ಯನ್ಮುಹೂರ್ತಂ ಕ್ಷಣಂವಾಪಿ ವಾಸುದೇವೋ ನ ಚಿಂತ್ಯತೆ ॥ (೪೭ನೆ ಶ್ಲೋಕ)

ಭಗವಂತನ ಚಿಂತನೆ ಇಲ್ಲದೇ ಕಳೆದ ಒಂದೊಂದು ಕ್ಷಣವೂ, ಮುಹೂರ್ತವೂ ದೊಡ್ಡ ಹಾನಿಯೇ ಸರಿ. ದೊಡ್ಡ ಪಾಪವೂ ಕೂಡ. ಅದೇ ಜೀವನದ ಕುರುಡು. ಜೀವನದ ಜಾಡ್ಯ ಹಾಗೂ ಮೂಕತೆಯು.

ಈ ಮಾನವ ಜನ್ಮವು ಸಾರ್ಥಕವಾಗಬೇಕಾದರೆ ಪರಮಾತ್ಮನ ಸ್ಮರಣೆ ಅತೀ ಅವಶ್ಯವು. ಇದನ್ನು ಶ್ರೀಮದಾಚಾರ್ಯರು ಈ ರೀತಿ ತಿಳಿಸಿದ್ದಾರೆ.

ಕಲಿಕಲ್ಮಷ ಮತ್ಯುಗ್ರಂ ನರಕಾರ್ತಿಪ್ರದಂ ನೃಣಾಂ ।
ಪ್ರಯಾತಿ ವಿಲಯಂ ಸದ್ಯಃ ಸಕೃತ್ಸಂ ಕೀರ್ತಿತೇಽಚ್ಯುತೇ ॥ (ಶ್ರೀ ಕೃ.ಮ. ೫೮)

ಕಲಿಕಾಲದಲ್ಲಿ ಕಲಿಕಲ್ಮಷವು ಅತ್ಯುಗ್ರವಾದುದು. ಅದು ನರಕಾದಿ ಅನರ್ಥಗಳನ್ನು ಕೊಡಬಲ್ಲುದು. ಆದರೆ ಭಗವನ್ನಾಮ ಸಂಕೀರ್ತನೆಯು ಇದೆಲ್ಲವನ್ನು ನಾಶಮಾಡಲು ಸಮರ್ಥವಾಗಿದೆ. ಕಾರಣ ಭಗವಂತನ ಸ್ಮರಣೆಮಾಡಿ ಈ ಸಂಸಾರ ಸಾಗರದಿಂದ ಮಾನವರು ಪಾರಾಗಬೇಕು.

"Man is an architect of his own life" ಎಂಬ ಇಂಗ್ಲೀಷ ಗಾದೆಯು ಮಾನವನು ತನ್ನ ಜೀವನದ ಶಿಲ್ಪಿಯಾಗಿದ್ದಾನೆಂದು ತಿಳಿಸುತ್ತದೆ. ಹೀಗಿರುವದರಿಂದ ಮಾನವರು ಭಗವಂತನ ನಿರಂತರ ಚಿಂತನ, ಸ್ಮರಣೆಗಳನ್ನು ಮಾಡಿ ಜನ್ಮವನ್ನು ಸಾರ್ಥಕಮಾಡಿಕೊಳ್ಳಬೇಕೆಂಬುದಾಗಿ ಶ್ರೀ ಪುರಂದರದಾಸರು ಒತ್ತಿ ಹೇಳಿರುವುದನ್ನು ಪ್ರತಿಯೊಬ್ಬರೂ ಗಮನಿಸಬೇಕು.

ಕಣ್ಣು ಕೈಕಾಲ್ ಕಿವಿ ನಾಲಿಗೆ ಇರಲಿಕ್ಕೆ
ಮಣ್ಣುಮುಕ್ಕಿ ಮರುಳಾಗುವರೆ
ಹೆಣ್ಣು ಮಣ್ಣಿಗಾಗಿ ಹರಿಯ ನಾಮಾಮೃತವ
ಉಣ್ಣದೇ ಉಪವಾಸ ಇರುವರೇ ಖೋಡಿ ॥ ೧ ॥

ಪರಮಾತ್ಮನು ಮಾನವನಿಗೆ ಕಣ್ಣು, ಕೈ, ಕಾಲು, ಕಿವಿ, ನಾಲಿಗೆ ಮುಂತಾದ ಉಪಯುಕ್ತವಾದ ಎಲ್ಲ ಅಂಗಗಳನ್ನು ದಯಪಾಲಿಸಿದ್ದಾನೆ. ಹೀಗಿರುವಾಗ ಹೆಣ್ಣು, ಹೊನ್ನು, ಮಣ್ಣಿಗಾಗಿ ಅಂದರೆ ಇವುಗಳನ್ನೇ ಸಂಪಾದಿಸುವದಕ್ಕಾಗಿ ಮಾತ್ರ ಈ ಅಂಗಗಳನ್ನು ಉಪಯೋಗಿಸಿದಲ್ಲಿ ಮಾನವ ಜೀವನವು ನಿರರ್ಥಕವೆನಿಸುತ್ತದೆ. ಪರಮಾತ್ಮನ ಸೇವೆಗೆ ಈ ಅಂಗಗಳನ್ನು ಉಪಯೋಗಿಸಿಕೊಂಡು ನಾಲಿಗೆಯಿಂದ ಶ್ರೀಹರಿಯ ನಾಮಾಮೃತವನ್ನು ಉಣ್ಣುವುದಾದರೆ ಈ ಮಾನವ ಜನ್ಮವು ಸಾರ್ಥಕವೆನಿಸುವದೆಂದು ಶ್ರೀ ಪುರಂದರದಾಸರು ಇಲ್ಲಿ ತಿಳಿಸಿದ್ದಾರೆ.

ಈಗ ಶ್ರೀ ವಿಷ್ಣುಪುರಾಣದ ವಾಕ್ಯವೊಂದನ್ನು ಅವಲೋಕಿಸೋಣ —

ಸ್ವರ್ಗಾಪವರ್ಗೌ ಮಾನುಷ್ಯಾತ್ ಪ್ರಾಪ್ನುವಂತಿ ವರಾನನೇ ।
ಯಥಾಭಿ ರುಚಿತಂ ಸ್ಥಾನಂ ತದ್ಯಾಂತಿ ಮನುಜಾ ದ್ವಿಜ ॥

ಸ್ವರ್ಗವಾಗಲಿ ಮೋಕ್ಷವಾಗಲಿ ಪಡೆಯುವದು ಮನುಷ್ಯನಿಗೆ ಮಾತ್ರ ಸಾಧ್ಯ. ಅವರು ತಮ್ಮ ತಮ್ಮ ಅಭಿರುಚಿಗೆ ತಕ್ಕಂತೆ ಸ್ಥಾನವನ್ನು ಅನುಭವಿಸಬಲ್ಲರು. ಇತರ ಜೀವಿಗಳಿಗೆ ಇದು ಸಾಧ್ಯವಿಲ್ಲ. ಏಕೆಂದರೆ ಪರಮಾತ್ಮನ ಸೃಷ್ಟಿಯಲ್ಲಿ ವಿಚಾರಮಾಡಿ ಕೃತಿಗೈಯುವ ಸಾಮರ್ಥ್ಯ ಮನುಷ್ಯನಿಗೆ ಮಾತ್ರ ದೊರಕಿದೆ.

ಸ್ವರ್ಗಾಪವರ್ಗಗಳನ್ನು ಪಡೆಯಲು ಮಾನವರಿಗೆ ಸಾಧನೆ ಅತ್ಯವಶ್ಯ. ಇದಕ್ಕೆ ಭಗವಂತನು ಕಣ್ಣು, ಕೈ, ಕಾಲು, ಕಿವಿ, ನಾಲಿಗೆ ಮುಂತಾದ ಅಮೌಲ್ಯವಾದ ಅಂಗಗಳನ್ನು ಕೊಟ್ಟಿದ್ದಾನೆ. ಇವುಗಳನ್ನು ಸಾರ್ಥಕಕರ್ಮಗಳಲ್ಲಿ ಉಪಯೋಗಿಸಬೇಕಾದುದು ಪ್ರತಿಯೊಬ್ಬರ ಕರ್ತವ್ಯವಾಗಿದೆ.

ಶ್ರೀಮದ್ಭಾಗವತದಲ್ಲಿ ಹೀಗೆ ತಿಳಿಸಿದ್ದಾರೆ.

ವಾಣೀಗುಣಾನು ಕಥನೇ ಶ್ರವಣೌ ಕಥಾಯಾಂ
ಹಸ್ತೌ ಚ ಕರ್ಮಸು ಮನಸ್ತವ ಪಾದಯೋರ್ನಃ ॥
ಸ್ಮೃತ್ಯಾಂ ಶಿರಸ್ತವ ನಿವಾಸ ಜಗತ್ಪ್ರಣಾಮೇ
ದೃಷ್ಟಿಃ ಸತಾಂ ದರ್ಶನೇಽಸ್ತು ಭವತ್ತನೂನಾಮ್ ॥ (೧೦ ೧೦-೩೮)

ನಮ್ಮ ವಾಣಿಯು ಭಗವಂತನ ಗುಣಗಳನ್ನು ಸ್ತುತಿಸುವದರಲ್ಲಿ, ಕಿವಿಗಳು ಭಗವಂತನ ಕಥೆ ಕೇಳುವದರಲ್ಲಿ, ಕೈಗಳು ಭಗವತ್‌ಸೇವೆಯಲ್ಲಿ, ಮನಸ್ಸು ಪಾದಸ್ಮರಣೆಯಲ್ಲಿ

ತಲೆಯು ಭಗವಂತನನ್ನು ನಮಸ್ಕರಿಸುವದರಲ್ಲಿ, ದೃಷ್ಟಿಯು ಚಲಪ್ರತಿಮೆಗಳೆನಿಸಿದ, ಸಜ್ಜನರ ದರ್ಶನದಲ್ಲಿ ಆಸಕ್ತವಾಗಿರಬೇಕು ಒಟ್ಟಿನಲ್ಲಿ ನಮ್ಮ ಪ್ರತಿಯೊಂದು ಅವಯವವು ಪರಮಾತ್ಮನ ಸೇವೆಗೆ ಮೀಸಲಾಗಿರಬೇಕೆಂದು ಇಲ್ಲಿ ತಿಳಿಸಿದ್ದಾರೆ.

ಹೆಣ್ಣು, ಹೊನ್ನು, ಮಣ್ಣು ಇವುಗಳಿಗಾಗಿ ಪರದಾಡುತ್ತ ಶ್ರೀಹರಿಯ-ನಾಮಾಮೃತವನ್ನು ಸವಿಯದೇ ಇದ್ದರೆ ಅದೊಂದು ಮಾನವರ ಮೂರ್ಖತನವೆನ್ನುತ್ತಾರೆ. ಶ್ರೀದಾಸರು.

ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ । (ಗೀತಾ ೬-೮)

ಗೀತೆಯಲ್ಲಿ ಮಣ್ಣು, ಕಲ್ಲು, ಬಂಗಾರ ಇವುಗಳನ್ನು ಸಮನಾಗಿ ನೋಡುವವನು ಯೋಗ್ಯನೆಂಬುದಾಗಿ ತಿಳಿಸಿರುವರು. ಕಾರಣ ಇವುಗಳಿಗಾಗಿ ತಲೆಕೆಡಿಸಿಕೊಳ್ಳದೇ ಪರಮಾತ್ಮನ ನಾಮಸ್ಮರಣೆ ಮಾಡುತ್ತ ಇರುವ ಜೀವನವು ಸಾರ್ಥಕವೆನಿಸುತ್ತದೆ.

ಕಾಲನ ದೂತರು ಕಾಲ್ಪಿಡಿದೆಳೆವಾಗ
ತಾಳು ತಾಳೆಂದರೆ ತಾಳುವರೇ
ದಾಳಿ ಬಾರದ ಮುನ್ನ ಧರ್ಮವ ಗಳಿಸಿರೋ
ಸುಳ್ಳಿನ ಸಂಸಾರ ಸುಳಿಗೆ ಸಿಕ್ಕಲು ಬೇಡಿ ॥ ೩ ॥

ಯಮದೂತರು ಈ ಜೀವನನ್ನು ಸೆಳೆದುಕೊಂಡು ಹೋಗಲು ಯಾವಾಗ ಬರುವರೋ ತಿಳಿಯದು. ಅವರು ಸೆಳೆಯಲು ಬಂದಾಗ ತಾಳು ಎಂದು ಹೇಳಿದರೆ ತಾಳರು. ಅದು ಸಾಧ್ಯವಿಲ್ಲದ ಮಾತು. ಕಾರಣ ಮಾನವನ ಶರೀರಕ್ಕೆ ದಾಳಿ ಬರುವ ಮೊದಲು ಅಂದರೆ ಇದು ಬಿದ್ದು ಹೋಗುವ ಮೊದಲು ಧರ್ಮವನ್ನು ಗಳಿಸಬೇಕಾದುದು ಅತೀ ಅವಶ್ಯವು. ಈ ಸಂಸಾರವು ಮತ್ತೆ ಮತ್ತೆ ಬಂಧನವನ್ನೇ ತಂದುಕೊಡುವದರಿಂದ ಈ ಸುಳಿಯಿಂದ ಪಾರಾಗಲು ಯತ್ನಿಸುವದು ಯೋಗ್ಯವಾಗಿದೆ.

ಧರ್ಮ ಕಾರ್ಯಗಳನ್ನು ನಿರಂತರ ಮಾಡುತ್ತ ಇರಬೇಕು. ಧರ್ಮ ಸಂಗ್ರಹವನ್ನು ತಪ್ಪದೇ ಮಾಡಿ ನಿತ್ಯ ಸುಖಭಾಗಿಗಳಾಗಬೇಕು.

ಇದನ್ನೇ ಶ್ರೀಮನ್ಮಹಾಭಾರತಕಾರರು ಹೀಗೆ ಹೇಳುತ್ತಾರೆ.

ಕೋಹಿ ಜಾನಾತಿ ಕಸ್ಯಾದ್ಯ ಮೃತ್ಯುಕಾಲೋ ಭವಿಷ್ಯತಿ ॥
ಯುವೈವ ಧರ್ಮಶೀಲಃ ಸ್ಯಾತ್ ಅನಿತ್ಯಂ ಖಲು ಜೀವಿತಮ್ ॥

ಮನುಸ್ಮೃತಿಕಾರರು ಹೀಗೆ ಹೇಳುತ್ತಾರೆ—

ಮೃತಂ ಶರೀರಮುತ್ಸೃಜ್ಯ ಕಾಷ್ಠಲೋಷ್ಠ ಸಮಂ ಕ್ಷಿತೌ ।
ವಿಮುಖಾ ಭಾಂಧವಾ ಯಾಂತಿ ಧರ್ಮಸ್ತಮನುಗಚ್ಛತಿ ॥

ತಸ್ಮಾದ್ಧರ್ಮಂ ಸಹಾಯಾರ್ಥಂ ನಿತ್ಯಂ ಸಂಚಿನುಯಾತ್ ಶನೈಃ ।
ಧರ್ಮೇಣ ಹಿ ಸಹಾಯೇನ ತಮಸ್ತರತಿ ದುಸ್ತರಮ್ ॥

ಸುಭಾಷಿತಕಾರರು ಧರ್ಮ ಸಂಗ್ರಹ ಮಾಡುವ ಕುರಿತು ಹೀಗೆ ಹೇಳುತ್ತಾರೆ—

ಅನಿತ್ಯಾನಿ ಶರೀರಾಣಿ ವಿಭವೋ ನೈವ ಶಾಶ್ವತಃ ।
ನಿತ್ಯಂ ಸನ್ನಿಹಿತೋ ಮೃತ್ಯುಃ ಕರ್ತವ್ಯೋ ಧರ್ಮ ಸಂಗ್ರಹಃ ॥

ಹಾಗೂ "ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್" ಎಂಬಂತೆ ಮೃತ್ಯುವಿನಿಂದ ನಾವು ಹಿಡಿಯಲ್ಪಟ್ಟದ್ದೇವೆಂದು ತಿಳಿದು ನಿತ್ಯವೂ ಧರ್ಮವನ್ನು ಆಚರಿಸುತ್ತಿರಬೇಕು.

ಮೇಲಿನ ಪದ್ಯದಲ್ಲಿ ಶ್ರೀದಾಸರು ಸಂಸಾರ ಸುಳಿಗೆ ಸಿಕ್ಕಬೇಡಿ ಎಂಬುದಾಗಿ. ಎಚ್ಚರಿಕೆ ನೀಡಿದ್ದಾರೆ. ಶ್ರೀಮದ್‌ಭಾಗವತದಲ್ಲಿ ಇದನ್ನು ಕೆಳಗಿನಂತೆ ನಿರೂಪಿಸಿದ್ದಾರೆ.—

ಸಂಸಾರ ಸಿಂಧುಮತಿ ದುಸ್ತರ ಮುತ್ತಿತೀರ್ಷೋಃ ।
ನಾನ್ಯಃ ಪ್ಲವೋ ಭಗವತಃ ಪುರುಷೋತ್ತಮಸ್ಯ ॥
ಲೀಲಾಕಥಾರಸ ನಿಷೇವಣ ಮಂತರೇಣ ।
ಪುಂಸೋ ಭವೇದ್ ವಿವಿಧ ದುಃಖದವಾರ್ದಿತಸ್ಯ ॥ (೧೨-೪-೪೦)

ಸಂಸಾರವೆಂಬುದೊಂದು ಸಾಗರ. ಇದರಲ್ಲಿ ಅನೇಕ ಸುಳಿಗಳು ಇವುಗಳಲ್ಲಿ ಸಿಕ್ಕದೇ ಈ ಸಂಸಾರಸಾಗರವನ್ನು ದಾಟುವದು ಅತೀ ದುಸ್ತರವಾದದ್ದು. ಇದನ್ನು ದಾಟಲು ಭಗವಂತನ ಲೀಲಾ ಕಥೆಗಳನ್ನು ಅವುಗಳಲ್ಲಿರುವ ರಸಾಸ್ವಾದನೆಯನ್ನು ಮಾಡದೇ ಹೋದರೆ ಎಂದಿಗೂ ಸಾಧ್ಯವಿಲ್ಲ. ಮಾನವ ಜನ್ಮವನ್ನು ಹೊಂದಿದ ಮೇಲೆ ಇಂಥ ಕಾರ್ಯಗಳನ್ನು ಮಾಡುತ್ತಲೇ ಇರಬೇಕು ಎಂಬುದು ದಾಸರ ಆಶಯವಾಗಿದೆ.

ಏನು ಕಾರಣ ಯದುಪತಿಯು ಮರೆತಿರಿ
ಧನಧಾನ್ಯ ಸತಿಸುತರು ಕಾಯುವರೆ ।
ಇನ್ನಾದರೂ ಏಕೋಭಾವದಿ ಭಜಿಸಿರೋ
ಚೆನ್ನ ಶ್ರೀ ಪುರಂದರವಿಠ್ಠಲರಾಯನ ॥ ૩ ॥

ಪ್ರತಿಯೊಬ್ಬ ಮಾನವನು ತನ್ನ ಜೀವಿತ ಕಾಲದಲ್ಲಿ ತನ್ನನ್ನು ಧನ, ಧಾನ್ಯ, ಸತಿ, ಸುತರು ರಕ್ಷಿಸುವರು ಎಂಬುದಾಗಿ ಭಾವಿಸುತ್ತಾನೆ. ಇದು ಸಾಧ್ಯವಿಲ್ಲದ ಮಾತು. ಮಾನವರನ್ನು, ಚರಾಚರ ವಸ್ತುಗಳೆಲ್ಲವನ್ನು ರಕ್ಷಿಸುವವನು ಭಗವಂತನೊಬ್ಬನೆ ಕಾರಣ ಯದುಪತಿಯಾದ ಭಗವಂತನನ್ನು ಮರೆಯಲಾಗದು. "ಯದನುಗ್ರಹತಃ

ಸಂತಿ ನ ಸಂತಿ ಯದುಪೇಕ್ಷಯಾ" ಎಂದಿರುವದರಿಂದ ಆ ಭಗವಂತನ ಅನುಗ್ರಹ ಸಂಪಾದನೆಗಾಗಿ ಒಮ್ಮನಸ್ಸಿನಿಂದ ಅನನ್ಯಭಾವದಿಂದ ಭಜಿಸಬೇಕೆಂದು ಶ್ರೀದಾಸರು ಇಲ್ಲಿ ತಿಳಿಸಿದ್ದಾರೆ—

ಯದುಪತಿಯಾದ ಶ್ರೀಕೃಷ್ಣನನ್ನು ಮರೆಯಲಾಗದು ಕಾರಣವೆಂದರೆ- ಶ್ರೀಮದ್‌ಭಗವದ್ಗೀತೆಯಲ್ಲಿ ಕೆಳಗಿನಂತೆ ಅಭಯಕೊಟ್ಟಿದ್ದಾನೆ.

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥ (೯-೨೨)

ಅನನ್ಯಭಾವದಿಂದ, ಏಕೋಭಾವದಿಂದ, ಭಗವಂತನನ್ನು ಸರ್ವೋತ್ತಮತ್ವೇನ ಭಜಿ ದಲ್ಲಿ ಭಗವಂತನು ಪುನರಾವೃತ್ತಿರಹಿತವಾದ ಮೋಕ್ಷವನ್ನು ಕೊಟ್ಟು ರಕ್ಷಿಸುವದ ನಿಶ್ಚಿತವು.

ನಾಮುತ್ರಹಿ ಸಹಾಯಾರ್ಥಂ ಪಿತಾಮಾತಾ ಚ ತಿಷ್ಠತಃ ।
ನ ಪುತ್ರದಾರಾ ನ ಜ್ಞಾತಿಃ ಧರ್ಮಸ್ತಿಷ್ಠತಿ ಕೇವಲಃ ॥

ಎಂಬ ಮನುಸ್ಮೃತಿವಾಕ್ಯದಂತೆ ಸತಿಸುತರು ಮಾನವನನ್ನು ರಕ್ಷಿಸಲು ಸಮರ್ಥರ ಧರ್ಮ ಮಾತ್ರವೇ ರಕ್ಷಿಸುತ್ತದೆ ಸಂದೇಹವಿಲ್ಲ.

ಮತ್ತು "ಪುತ್ರದಾರಾಪ್ತ ಬಂಧೂನಾಂ ಸಂಗಮಃ ಪಾಂಥ ಸಂಗಮಃ" (೧೧-೧೭-೫ ಶ್ರೀಮದ್‌ಭಾಗವತ ವಾಕ್ಯದಂತೆ ಸತಿಸುತರ ಜೊತೆಯು ದಾರಿಹೋಕರ ಗೆಳೆತ ಇದ್ದಂತೆಯೇ ಸರಿ, ದಾರಿಯಲ್ಲಿ ಹೋಗುವಾಗ ಅವರ ಜೊತೆ ಚೆನ್ನಾಗಿ ಇ ಎನಿಸಿದರೂ ತಮ್ಮ ಊರು ಬಂದಾಕ್ಷಣವೇ ನಮ್ಮನ್ನಗಲಿ ಹೋಗಿ ಬಿಡುವದ ಅನುಭವ ವೇದ್ಯ.

"ಪಾಲಕೋ ಹಿ ಬಹೂನಾಂ ಚ ಭಕ್ತಾನಾಂ ಭಕ್ತವತ್ಸಲಃ" ಎಂಬ ಆದಿತ ಪುರಾಣದ ವಾಕ್ಯದಂತೆ ಶರಣಾಗತರನ್ನು ಭಕ್ತವತ್ಸಲನಾದ ಭಗವಂತನು ರಕ್ಷಿಸುವದ ನಿಶ್ಚಿತವು.

ಒಟ್ಟಿನಲ್ಲಿ ಈ ಮಾನವಜನ್ಮ ಬಂದಾಗ ಸಾರ್ಥಕ ಜೀವನ ನಡೆಸಿ ಪರಮಾತ್ಮ ನನ್ನು ಏಕೋಭಾವದಿಂದ (ಸರ್ವೋತ್ತಮತ್ವೇನ) ಭಜಿಸಲು ಶ್ರೀಹರಿಯು ಭಕ್ತರಿ ಮೋಕ್ಷಾದಿ ಪುರುಷಾರ್ಥಗಳನ್ನು ಕೊಟ್ಟು ರಕ್ಷಿಸುವನೆಂಬುದಾಗಿ ಇಡೀ ಮಾನ ಕುಲಕ್ಕೆ ಶ್ರೀ ಪುರಂದರದಾಸರು ಎಚ್ಚರಿಕೆ ನೀಡಿದ್ದಾರೆ.

**ಶ್ರೀಮಧ್ವೇಶಾರ್ಪಣಮಸ್ತು**

|| ಶ್ರೀಃ ||

# ಹರಿಸ್ಮರಣೆ ಮಾಡೋ ನಿರಂತರ

ಶ್ರೀಪುರಂದರದಾಸರು

ಹರಿಸ್ಮರಣೆ ಮಾಡೋ ನಿರಂತರ || ಪ ||
ಪರಗತಿಗೆ ಇದು ನಿಧಾನ || ಅ ||

ದುರಿತ ಗಜಕ್ಕೆ ಕಂಠೀರವನೆನಿಸಿದ
ಶರಣಾಗತ ರಕ್ಷಕ ಪಾವನ ನೀ || ೧ ||

ಸ್ಮರಣೆಗೈದ ಪ್ರಹ್ಲಾದನ ರಕ್ಷಿಸಿದ
ದುರುಳ ಹಿರಣ್ಯಕನುದರವ ಸೀಳಿದ || ೨ ||

ತರುಣಿ ದ್ರೌಪದಿ ಮೊರೆಯಿಡಲಾಕ್ಷಣ
ಭರದಿಂದಕ್ಷಯವಿತ್ತ ಮಹಾತ್ಮನ || ೩ ||

ಅಂದು ಅಜಾಮಿಳ ಕಂದನ ಕರೆಯಲು
ಬಂದು ಸಲಹಿ ಆನಂದವ ತೋರಿದ || ೪ ||

ಶ್ರೀಶ ಪುರಂದರವಿಠ್ಠಲರಾಯನ
ಸೃಷ್ಟಿಗೊಡೆಯನ ಮುಟ್ಟಿ ಭಜಿಸಿ ನೀ || ೫ ||

ಶ್ರೀ ಮಧ್ವೇಶಾರ್ಪಣಮಸ್ತು

ಈ ಕೀರ್ತನೆಯಲ್ಲಿ ಭಕ್ತಿಪೂರ್ವಕವಾದ ಭಗವಂತನ ಸ್ಮರಣೆಯೇ ಮುಕ್ತಿಗೆ ಸಾಧನವೆಂಬ ತತ್ವವನ್ನು ಹೃದಯಂಗಮವಾಗಿ ಸೋದಾಹರಣವಾಗಿ ಶ್ರೀ ಪುರಂದರ ದಾಸರು ವಿವರಿಸಿದ್ದಾರೆ.

ಹರಿಸ್ಮರಣೆ ಮಾಡೋ ನಿರಂತರ || ಪ ||
ಪರಗತಿಗೆ ಇದು ನಿಧಾನ || ಅ. ಪ ||

ನಿರಂತರವೂ ಅಂದರೆ ಸರ್ವದಾ, ಸರ್ವಕಾಲಗಳಲ್ಲಿ ಹರಿಸ್ಮರಣೆ ಮಾಡುವದು ಅತೀ ಅವಶ್ಯವು. ಪರಗತಿಯೆಂದರೆ ಮೋಕ್ಷ ಇದನ್ನು ಪಡೆಯಲು ಶ್ರೀ ಹರಿಸ್ಮರಣೆಯು ಆಸರೆ ಎಂದೆನಿಸಿದೆ. ಈ ತತ್ವವನ್ನು ಇಲ್ಲಿ ದಾಸರು ತಿಳಿಸಿದ್ದಾರೆ.

ಮೊದಲನೆಯದಾಗಿ ಮನುಷ್ಯ ಜನ್ಮವು ಅತ್ಯಂತ ದುರ್ಲಭವಾಗಿದೆ. ದೇವತೆಗಳು ಕೂಡ ಈ ಮನುಷ್ಯ ಜನ್ಮವನ್ನು ಬಯಸಿ ಪಡೆಯುತ್ತಾರೆ. ಇಂಥ ಅಪರೂಪವಾದ ಜನ್ಮವನ್ನು ಪಡೆದ ಮೇಲೆ ಬುದ್ಧಿವಂತನಾದ ಮನುಷ್ಯನು ಪರಲೋಕ-ಹಿತಕ್ಕಾಗಿ (ಮೋಕ್ಷಕ್ಕಾಗಿ) ಪ್ರಯತ್ನಿಸಬೇಕು. ಇದು ಈ ಶ್ಲೋಕದಿಂದ ತಿಳಿದು ಬರುತ್ತದೆ.

ದುರ್ಲಭಂ ಮಾನುಷಂ ಜನ್ಮ ಪ್ರಾರ್ಥ್ಯತೇ ತ್ರಿದಶೈರಪಿ ॥
ತಲ್ಲಬ್ಧ್ವಾ ಪರಲೋಕಾರ್ಥಂ ಯತ್ನಂ ಕುರ್ಯಾದ್ವಿಚಕ್ಷಣಃ ॥
(ಶ್ರೀ ನಾರದ ಮಹಾಪುರಾಣ)

ಇನ್ನು ಅಂತ್ಯ ಕಾಲದ ಹರಿಸ್ಮರಣೆಯೇ ಮೋಕ್ಷಕ್ಕೆ ಸಾಧನವೆಂದು ಶ್ರೀಕೃಷ್ಣನು ಹೀಗೆ ಹೇಳುತ್ತಾನೆ.

ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಳೇವರಮ್ ।
ಯಃ ಪ್ರಯಾತಿ ಸಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥
(ಗೀತಾ ೮-೫)

ಯಾವನು ಮರಣ ಕಾಲದಲ್ಲಿ ಕೂಡ ನನ್ನನ್ನೇ ಸ್ಮರಿಸುತ್ತಾ ದೇಹವನ್ನು ತ್ಯಜಿಸುತ್ತಾನೆಯೋ ಆತನು ನನ್ನಲ್ಲಿ ಇರುವಿಕೆಯನ್ನು (ಮೋಕ್ಷ) ಹೊಂದುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ. ಹೀಗೆ ಅಂತ್ಯಕಾಲದಲ್ಲಿ ಪರಮಾತ್ಮನ ಸ್ಮರಣೆಯು ಬರಬೇಕಾದರೆ ಸಂತತವೂ ಶ್ರೀ ಹರಿಯ ಸ್ಮರಣೆ ಅವಶ್ಯವೇ ಸರಿ. ಇದನ್ನು ಶ್ರೀಮದಾನಂದ ತೀರ್ಥ ಭಗವತ್ಪಾದರು.

ಸಂತತಂ ಚಿಂತಯೇಽನಂತ ಮಂತಕಾಲೇ ವಿಶೇಷತಃ ॥
(ಶ್ರೀ ದ್ವಾದಶ ಸ್ತೋತ್ರ ೧-೧೨)

ಈ ಶ್ಲೋಕಭಾಗದಿಂದ ತಿಳಿಸುತ್ತಾರೆ.

ನಿರಂತರ ಶ್ರೀ ಹರಿಯ ಚಿಂತನೆ ಮಾಡುವುದು ಎಂದರೆ ಸರ್ವದಾ ಶ್ರೀಹರಿಯ ಗುಣಗಾನ ಮಾಡತಕ್ಕ ಶಾಸ್ತ್ರಗಳ ಅಭ್ಯಾಸವನ್ನು ಪುನಃ ಪುನಃ ಮಾಡಿ—

ಓಂ ಆವೃತ್ತಿಃ ಅಸಕೃದುಪದೇಶಾತ್ ಓಂ ॥ (ಶ್ರೀ ಬ್ರಹ್ಮಸೂತ್ರ ೪-೧-೧)

ಇಲ್ಲಿ ತಿಳಿಸಿದಂತೆ ಆ ಭಗವಂತನ ಗುಣಗಳ ಮನನ ನಿಧಿಧ್ಯಾಸನ ಮಾಡುವದು ಎಂದು ಅರ್ಥವಾಗುತ್ತದೆ. ಹೀಗೆ ಮಾಡಲು ಸಂಸಾರದಲ್ಲಿ ವೈರಾಗ್ಯವು ಕೂಡ ಅವಶ್ಯವೇ.

"ಅಸಂಗ ಆತ್ಮವ್ಯತಿರಿಕ್ತ ವಸ್ತುನಿ ಧೃಢಾರತಿ ಬ್ರಹ್ಮಣಿ" ಎಂಬ ಶ್ರೀಮದ್ ಭಾಗವತ ವಾಕ್ಯದಂತೆ ಮನುಷ್ಯನು ವೈರಾಗ್ಯವನ್ನು ಹೊಂದಿದ್ದರೆ ಮಾತ್ರ ಭಗವಂತನ ಸಂತತ ಸ್ಮರಣೆಯೂ ಸಿದ್ಧಿಸುತ್ತದೆ.

ವೈರಾಗ್ಯವಿಲ್ಲದಿದ್ದರೆ ಶ್ರೀ ಹರಿಸ್ಮರಣೆ ಬರಲಾರದು. ಇದು ಶ್ರೀಮನ್-ಮಹಾಭಾರತದಲ್ಲಿ ಹೀಗೆ ಪ್ರತಿಪಾದಿತವಾಗಿದೆ.

ವಿಷಯೇಷು ಚ ಸಂಸರ್ಗಾತ್ ಶಾಶ್ವತಸ್ಯಚ್ ಸಂಶಯಾತ್ ।
ಮನಸಾಚಾನ್ಯದಾ ಕಾಂಕ್ಷಾತ್ ಪರಂ ನ ಪ್ರತಿಪದ್ಯತೇ ॥

ಇನ್ನು ಅನಂತ ಕಲ್ಯಾಣ ಗುಣ ಪರಿಪೂರ್ಣನಾದ ಶ್ರೀ ಹರಿಯ ಧ್ಯಾನವನ್ನು ಅಲ್ಪ ಭಕ್ತರಿಂದ ಬ್ರಹ್ಮದೇವರ ಪರ್ಯಂತ ಎಲ್ಲರೂ ಮಾಡಬೇಕಾದುದು ಶಾಸ್ತ್ರವಿಹಿತವಾಗಿರುವಾಗ ಎಲ್ಲರಿಗೂ ಎಲ್ಲ ಗುಣಗಳ ಧ್ಯಾನ ಅಶಕ್ಯವೆನಿಸುವದು ಸಹಜವೇ. ಕಾರಣ ಹೇಗೆ ಮಾಡಬೇಕು ಎಂದರೆ "ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ (೪-೧-೩) ಎಂಬ ಸೂತ್ರವನ್ನು ವ್ಯಾಖ್ಯಾನಿಸುತ್ತಾ ಶ್ರೀಮದಾಚಾರ್ಯರು-

ಮಮಸ್ವಾಮೀ ಹರಿರ್ನಿತ್ಯಂ ಸರ್ವಸ್ಯಪತಿರೇವಚ ।
ಇತಿ ಧ್ಯೇಯಃ ಸರ್ವದಾ ಏವ ಭಗವಾನ್ ವಿಷ್ಣುರವ್ಯಯಃ ॥
(ಶ್ರೀಮದನುವ್ಯಾಖ್ಯಾನ)

ಅನಂತ ಕಲ್ಯಾಣ ಗುಣಪೂರ್ಣನಾದ ಸರ್ವದೋಷ ದೂರನಾದ ಶ್ರೀ ಹರಿಯು ನನ್ನ ಸ್ವಾಮಿಯು, ಸರ್ವರಿಗೂ ಸ್ವಾಮಿಯು ಎಂಬ ಅನುಸಂಧಾನ ಪೂರ್ವಕ ಶ್ರೀ ಹರಿ ಸ್ಮರಣೆ ಮಾಡಬೇಕು ಎನ್ನುತ್ತಾರೆ. ಮತ್ತು "ತದಲಂ ಬಹುಲೋಕವಿಚಿಂತನಯಾ ಪ್ರವಣಂ ಕುರು ಮಾನಸಮೀಶಪದೇ"- ಈ ಶ್ಲೋಕದಿಂದ ಸಂಸಾರದಲ್ಲಿ ಜೀವರು ಪ್ರತಿಕ್ಷಣದಲ್ಲಿ ಶ್ರೀ ಹರಿಯ ಧ್ಯಾನವನ್ನು ಮಾಡುವದು ಅಶಕ್ಯವಾದರೂ ಸಂಸಾರಕ್ಕಾಗಿ ಲೌಕಿಕ ವಿಚಾರವು ಅನಿವಾರ್ಯವೆಂದೆನಿಸಿದಷ್ಟೇ ಮಾಡಿ ಉಳಿದ ಅವಕಾಶವನ್ನು ಶ್ರೀಹರಿಪಾದಸ್ಮರಣೆಯಲ್ಲಿ ವಿನಿಯೋಗಿಸಿ ಸಾಧನಮಾಡಿಕೊಳ್ಳಬೇಕೆಂದು ಹೇಳುತ್ತಾರೆ.

ಶ್ರೀಹರಿಯ ಪಾದಸ್ಮರಣೆಯೇ ಅಗತ್ಯ ಏಕೆ? ಎಂದರೆ ಶ್ರೀ ವೇದವ್ಯಾಸರು ಹೀಗೆ ಹೇಳುತ್ತಾರೆ-

ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।
ವೇದಶಾಸ್ತ್ರಾತ್ ಪರಂ ನಾಸ್ತಿ ನ ದೈವಂ ಕೇಶವಾತ್ ಪರಂ ॥
(ಶ್ರೀಮನ್‌ಮಹಾಭಾರತ)

ಹರಿರೇಕಃ ಸದಾ ಧ್ಯೇಯೋ ಭವದ್ಭಿಃ ಸತ್ವ ಸಂಸ್ಥಿತೈಃ ।
ಓಮಿತ್ಯೇವಂ ಸದಾ ವಿಪ್ರಾಃ ಪಠತ ಧ್ಯಾತ ಕೇಶವಮ್ ॥
(ಶ್ರೀ ಹರಿವಂಶ ೩-೮೯-೯)

ಬ್ರಹ್ಮರುದ್ರಾದಿಗಳಿಗೂ ಸ್ವಾಮಿಯಾದ ಶ್ರೀ ಹರಿಯೇ ಸರ್ವೋತ್ತಮ ವಸ್ತುವಾದ್ದರಿಂದ ಅವನನ್ನೇ ಸ್ಮರಣೆ ಮಾಡುವದು ಅತೀ ಅವಶ್ಯ.

ಶ್ರೀ ಹರಿಯ ನಾಮಸ್ಮರಣೆಯನ್ನು ಅರ್ಥಾನುಸಂಧಾನಪೂರ್ವಕ ಭಕ್ತಿಶ್ರದ್ಧೆಗಳಿಂದ ಯುಕ್ತನಾಗಿ ಮಾಡಿದಲ್ಲಿ "ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ" ಎಂಬಂತೆ ಅಜ್ಞಾನಿಗಳಿಗೆ ಜ್ಞಾನಕೊಟ್ಟು, ಜ್ಞಾನಿಗಳಿಗೆ ಮೋಕ್ಷವನ್ನು ಭಗವಂತನು ಕೊಡುತ್ತಾನೆ.

ಇಲ್ಲಿ ಅರ್ಥಾನುಸಂಧಾಸ ಹೇಗೆ ? ಎಂಬುದಕ್ಕೆ ಒಂದೆರಡು ಉದಾಹರಣೆಗಳನ್ನು ಕೊಡಲಾಗಿದೆ.

೧ ರಾಮಃ = ಲೋಕಃ ರಮತೇ ಅನೇನ ಇತಿ ರಾಮಃ ।

೨ ಕೃಷ್ಣಃ = ನಿಯಮನಾದಿನಾ ಸಕಲ ಲೋಕ ಕರ್ಷಣಾತ್ ಕೃಷ್ಣಃ ।

೩ ಗೋವಿಂದ= ಗಾಃ ವೇದವಚಾಂಸಿ ವೇತ್ತಿ ಇತಿ ಗೋವಿಂದಃ ।

೪ ಅಚ್ಯುತ = ದೇಶತಃ ಕಾಲತಃ ಗುಣತಶ್ಚ ಚ್ಯುತಿರಹಿತತ್ವಾತ್ ಅಚ್ಯುತಃ।

ಶ್ರೀಮದಾಚಾರ್ಯರು ದ್ವಾದಶಸ್ತೋತ್ರದಲ್ಲಿ—

ಯತತೋಽಪಿ ಹರೇಃ ಪದ ಸಂಸ್ಮರಣೇ
ಸಕಲಂ ಹ್ಯಘಮಾಶು ಲಯಂವ್ರಜತಿ ।
ಸ್ಮರತಸ್ತುವಿಮುಕ್ತಿ ಪದಂ ಪರಮಂ
ಸ್ಫುಟಮೇಷ್ಯತಿತತ್ ಕಿಮು ಪಾತ್ರಿಯತೇ ॥ (೩-೩)

ಶ್ರೀ ಹರಿಯ ಪಾದ ಸ್ಮರಣೆಯನ್ನು ಭಕ್ತಿಪೂರ್ವಕ ಮಾಡಿದರೆ- ಮಾಡಲು ಪ್ರಯತ್ನ ಮಾಡಿದರೂ ಕೂಡ (ಪ್ರಾರಂಭಮಾತ್ರ ಮಿಚ್ಛಾವಾ ವಿಷ್ಣುಧರ್ಮೋ ನ ನಿಷ್ಫಲಾ ಎಂಬಂತೆ) ಸಮಸ್ತ ಪಾಪಗಳು ನಾಶವಾಗುತ್ತವೆ. ಶ್ರವಣ, ಮನನ, ನಿಧಿಧ್ಯಾಸನದಿಂದ ಅಪರೋಕ್ಷ ಜ್ಞಾನ ಹೊಂದಿ ಈ ಅಪರೋಕ್ಷಜ್ಞಾನದಿಂದ ಸಂಚಿತ ಕರ್ಮಗಳು ನಾಶವಾಗಿ ಆಗಾಮಿ ಕರ್ಮಗಳು ಲೇಪವಾಗದೇ (ಓಂತದಧಿಗಮ ಉತ್ತರ ಪೂರ್ವಾಘಯೋರ ಶ್ಲೇಷ ವಿನಾಶೌ ತದ್ವ್ಯಪದೇಶಾತ್ ಓಂ) (೪-೧-೯) ಸೂತ್ರದಲ್ಲಿ ತಿಳಿಸಿದಂತೆ ಪ್ರಾರಬ್ಧ ಕರ್ಮವನ್ನು ಭೋಗಿಸಿದ ನಂತರ ಮೋಕ್ಷವು ಸಿಗುತ್ತದೆ. ಇದನ್ನೇ ಶ್ರೀ ದಾಸರು "ಪರಗತಿಗೆ ನಿಧಾನ" ಅಂದರೆ ಮೋಕ್ಷಕ್ಕೆ ಆಸರೆ ಎಂಬುದಾಗಿ ತಿಳಿಸಿರುವರು.

ಈ ಸಂದರ್ಭದಲ್ಲಿ "ಹರಿಃಸ್ಮೃತಿಃ ಸರ್ವವಿಪದ್ವಿಮೋಕ್ಷಣಿ" ಎಂಬುದಾಗಿ- ಶ್ರೀಮದ್ ಭಾಗವತಕಾರರು ಹೇಳಿದ್ದನ್ನು ಸ್ಮರಿಸಿಕೊಳ್ಳುವದು ಅವಶ್ಯ.

ದುರಿತಗಜಕ್ಕೆ ಕಂಠೀರವನೆನಿಸಿದ-
ಶರಣಾಗತ ರಕ್ಷಕ ಪಾವನ ನೀ ॥ ೧ ॥

ಪರಮಾತ್ಮನು ಶರಣಾಗತ ರಕ್ಷಕನಾಗಿದ್ದಾನೆ. ಮತ್ತು ಪಾಪವೆಂಬ ಆನೆಗೆ ಸಿಂಹದಂತೆ ಇದ್ದಾನೆ. ಅಂದರೆ ಸಿಂಹವು ಆನೆಯನ್ನು ಸಂಹರಿಸಿ ನಾಶಮಾಡುವಂತೆ ಪರಮಾತ್ಮನು

ನಮ್ಮ ಪಾಪರಾಶಿಯನ್ನು ಅವನ ಸ್ಮರಣೆ ಮಾತ್ರದಿಂದ ನಾಶವಾಡುವದರಲ್ಲಿ ಸಂದೇಹವಿಲ್ಲ, ಎನ್ನುತ್ತಾರೆ. ಶ್ರೀದಾಸರು.

ಗೋವಿಂದ ಸ್ಮರಣಂ ಪುಂಸಾಂ ಪಾಪರಾಶಿ ಮಹಾಚಲಂ ।
ಅಸಂಶಯಂ ದಹತ್ಯಾಶು ತೂಲರಾಶಿ ಮಿವಾನಲಃ ॥
(ಶ್ರೀಕೃಷ್ಣಾಮೃತ ಮಹಾರ್ಣವ ೪೪ ಶ್ಲೋಕ)

ಗೋವಿಂದನ ನಾಮಸ್ಮರಣೆಯು ಮಾನವನ ಪಾಪರಾಶಿಯೆಂಬ ಮಹಾಪರ್ವತವನ್ನು ಅಗ್ನಿಕಣಗಳು ಅರಳಿಯ ರಾಶಿಯನ್ನು ಸುಟ್ಟು ಭಸ್ಮಮಾಡುವಂತೆ ನಿಸ್ಸಂಶಯವಾಗಿ ಶೀಘ್ರವಾಗಿ ಸುಟ್ಟುಹಾಕುತ್ತದೆ.

ಶ್ರೀಮದಾಚಾರ್ಯರು ಈ ವಿಷಯದಲ್ಲಿ "ಸರ್ವಪಾಪಾನಿಯತ್ ಸಂಸ್ಮೃತೇ ಸ್ಸಂಕ್ಷಯಮಾ್" ಎಂದಾಗಿ ಹೇಳಿದ್ದನ್ನು ಸ್ಮರಿಸಬಹುದು.

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥
(ಗೀತಾ ೧೮-೬೬)

ಸಕಲ ಕಾಮ್ಯಕರ್ಮಗಳನ್ನು ಬಿಟ್ಟು ನನ್ನನ್ನೇ ಶರಣು ಹೊಂದು. ನಾನು ನಿನ್ನನ್ನು ಸರ್ವಪಾಪಗಳಿಂದ ಮುಕ್ತನನ್ನಾಗಿ ಮಾಡುತ್ತೇನೆಂದು ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಅಪ್ಪಣೆ ಕೊಡಿಸಿದ್ದಾನೆ.

ಇದನ್ನೇ ಶ್ರೀ ಮದ್ ಭಾಗವತದಲ್ಲಿ-

ಮಾಮೇಕಮೇವ ಶರಣಮಾತ್ಮಾನಂ ಸರ್ವದೇಹಿನಾಮ್ ।
ಯೇಹಿ ಸರ್ವಾತ್ಮಭಾವೇನ ಮಯಾ ಸ್ಯಾ ಹ್ಯಕುತೋಭಯಃ ॥
(೧೧-೧೨-೧೫)

ಮತ್ತು

ರಕ್ಷತೀತ್ಯೇವ ವಿಶ್ವಾಸಃ ತದೀಯೋಽಹ ಮಿತಿಸ್ಮೃತಿಃ ।
ಶರಣಾಗತಿರೇಷಾ ಸ್ಯಾತ್ ವಿಷ್ಣೌಮೋಕ್ಷಪ್ರದಾಯಿನಿ ॥ (ಶ್ರೀ ವಿಷ್ಣುರಹಸ್ಯ)

ಪರಮಾತ್ಮನು ಬ್ರಹ್ಮಾದಿ ದೇವತೆಗಳನ್ನು ಸಹ ತನ್ನ ಉದರದಲ್ಲಿ ಇಟ್ಟುಕೊಂಡು ಪ್ರಲಯಕಾಲದಲ್ಲಿಯೂ ಇತರ ಸರ್ವಕಾಲಗಳಲ್ಲಿಯೂ ತನ್ನ ಆಶ್ರಯದಲ್ಲಿಟ್ಟು ಕೊಂಡು ರಕ್ಷಿಸುತ್ತಾನೆಂದು ಧೃಡವಿಶ್ವಾಸ ಉಳ್ಳವರಿಗೆ ಮತ್ತು ಶರಣಾಗತಿ ಉಳ್ಳವರಿಗೆ ಮೋಕ್ಷವನ್ನೇ ಕೊಡುವದು ನಿಶ್ಚಿತವು.

ಪರಮಾತ್ಮನು ಪಾವನ ಎಂದರೆ ಪವಿತ್ರನಾಗಿದ್ದಾನೆ. ಇದು ಹೀಗೆ ತಿಳಿದು ಬರುತ್ತದೆ.

ಪವಿತ್ರಾಣಾಂ ಹಿ ಗೋವಿಂದಃ ಪವಿತ್ರಂ ಪರಮುಚ್ಯತೇ ।
ಪುಣ್ಯಾನಾಮಪಿ ಪುಣ್ಯೋಽಸೌ ಮಂಗಲಾನಾಂಚ ಮಂಗಲಮ್ ॥

(ಶ್ರೀಮನ್‌ಮಹಾಭಾರತ)

ಗೋವಿಂದನು ಪವಿತ್ರವಾದ ವಸ್ತುಗಳಲ್ಲಿ ಪರಮ ಪವಿತ್ರನು. ಪುಣ್ಯವಸ್ತುಗಳಲ್ಲಿ ಪುಣ್ಯನು. ಮಂಗಲ ವಸ್ತುಗಳಲ್ಲಿ ಪರಮ ಮಂಗಲನೂ ಆಗಿದ್ದಾನೆ.

ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರದಲ್ಲಿ— "ಪವನಃ ಪಾವನೋಽನಲಃ" ಎನ್ನುವಂತೆ ಪರಮಾತ್ಮನಿಗೆ "ಪಾವನ" ಎಂದು ಹೆಸರಿದೆ—

ಪರಮಾತ್ಮನ 'ಪಾವನ' ಹೆಸರಿನ ವೈಶಿಷ್ಟ್ಯ ಹೀಗಿದೆ–

೧ ಪಾವಯತಿ ಶೋಧಯತಿ ಇತಿ– ಪಾವನಃ ।

ಶ್ರೀಹರಿಯು ತನ್ನನ್ನು ಸ್ಮರಿಸುವವರನ್ನು ಶುದ್ಧಗೊಳಿಸುವನಾದ್ದರಿಂದ ಅವನು 'ಪಾವನ' ನೆನಿಸಿದ್ದಾನೆ.

(ಯಃ ಸ್ಮರೇತ್ ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಃ ಶುಚಿಃ)

೨ ಪಾಂತೀತಿ ಪಾಃ ತತ್ವಾಭಿಮಾನ್ಯಾದಯಃ ತೈಃ ಅಸಮ್ಯಕ್ ವನ್ಯತೇ ಸಂಸೇವ್ಯತ ಇತಿ ಪಾವನಃ ।

ತತ್ವಾಭಿಮಾನಿದೇವತೆಗಳೇ ಮೊದಲಾದ ಪಾಲಕರಿಂದ ರಕ್ಷಣೆ ದೊರಕುವಂತೆ ಅನುಗ್ರಹಿಸುವನಾದ್ದರಿಂದ ಇವನಿಗೆ 'ಪಾವನ'ನೆಂದು ಹೆಸರು.

೩ ಪಾನಾಂ ಅವನಂ ಗಮನಂ ಜ್ಞಾನಂ ವಾ ಯಸ್ಮಾತ್‌ಸಃ ಪಾವನಃ

(ಅವ–ಗತೌ ಧಾತುವಿನಿಂದ)

ಪಾಲಕರಿಗೇ ಜ್ಞಾನವನ್ನು ಅನುಗ್ರಹಿಸುವವನಾದ್ದರಿಂದ ಇವನಿಗೆ "ಪಾವನ" ನೆಂಬ ಹೆಸರು ಇದೆ.

೪ ಪವನಸ್ಯಾಯಂ ನಿಯಾಮಕತ್ವೇನ ಸಂಬಂಧಿ ಇತಿ ಪಾವನಃ ।

ವಾಯುದೇವರಿಗೂ ನಿಯಾಮಕನಾದ್ದರಿಂದ ಇವನಿಗೇ "ಪಾವನ" ನೆಂದು ಹೆಸರಿದೆ.

ಮತ್ತು- "ಪಾವನಃ ಸರ್ವಭೂತಾನಾಂ ತ್ವಮೇವ ರಘುನಂದನ"

(ವಾ. ರಾ. ಉತ್ತರಕಾಂಡ ೮೨–೯)

ಎನ್ನುವ ವಾಲ್ಮೀಕಿರಾಮಾಯಣದ ವಾಕ್ಯದಂತೆ ಶ್ರೀರಾಮನು "ಪಾವನ" ನೆನಿಸಿದ್ದಾನೆ. ಇಂಥ ಶ್ರೀ ಹರಿಯ ಸ್ಮರಣೆಯನ್ನು ನಿರಂತರ ಮಾಡಬೇಕೆಂದು ಇಲ್ಲಿ ತಿಳಿಸಿದ್ದಾರೆ.

ಸ್ಮರಣೆಗೈದ ಪ್ರಹ್ಲಾದನ ರಕ್ಷಿಸಿದ
ದುರುಳ ಹಿರಣ್ಯಕನುದರವ ಸೀಳಿದ ॥ ೨ ॥

ಶ್ರೀ ಪ್ರಹ್ಲಾದರಾಜರು ಮಹಾಭಗವದ್ಭಕ್ತರು. ತಂದೆಯಾದ ಹಿರಣ್ಯಕಶಿಪುವು ಅನೇಕ ತರಹದ ತೊಂದರೆಕೊಟ್ಟರೂ, ಶಿಕ್ಷೆ ವಿಧಿಸಿದರೂ ತಾವು ಮಾತ್ರ ಪರಮಾತ್ಮನ ಸ್ಮರಣೆ ಬಿಡಲಿಲ್ಲ. ಇದರಿಂದಾಗಿ ಶ್ರೀಹರಿಯು ನರಸಿಂಹರೂಪದಿಂದ ಅವರನ್ನು ರಕ್ಷಿಸಿ ಹಿರಣ್ಯಕಶಿಪುವನ್ನು ಸಂಹರಿಸಿದ ವಿಷಯವನ್ನು ಇಲ್ಲಿ ತಿಳಿಯಪಡಿಸಿದ್ದಾರೆ–

ಶ್ರೀ ನೃಸಿಂಹಾವತಾರದ ಪ್ರಸಂಗ ಶ್ರೀಮದ್‌ಭಾಗವತದಲ್ಲಿ ನಿರೂಪಿತವಾಗಿದೆ. ಒಂದು ದಿನ ಹಿರಣ್ಯಕಶಿಪುವು ಪ್ರಹ್ಲಾದ ರಾಜರನ್ನು ಹತ್ತಿರ ಕರೆದು ಕೇಳುತ್ತಾನೆ. ಯಾರ ಬಲದಿಂದ ನೀನು ನನ್ನ ಆಜ್ಞೆಯನ್ನು ಉಲ್ಲಂಘಿಸುವಿ ? ಇದಕ್ಕೆ ಪ್ರಹ್ಲಾದ ರಾಜರು–

ನ ಕೇವಲಂ ಮೇ ಭವತಶ್ಚ ರಾಜನ್ ಸ ವೈ ಬಲಂ ಬಲಿನಾಂ ಚಾಪರೇಷಾಂ ॥
ಪರಾವರೇಮೀ ಸ್ಥಿರಜಂಗಮಾಯೇ ಬ್ರಹ್ಮಾದಯೋಯೇನ ವಶಂ
ಪ್ರಣೀತಾಃ ॥ (೭-೮-೮)

ರಾಜನೇ ! ಯಾವ ಬ್ರಹ್ಮದೇವರೇ ಮೊದಲಾದ ಚರಾಚರ ವಸ್ತುಗಳು ಬಲಿಷ್ಠನಾದ ಶ್ರೀಹರಿಯ ವಶವಾಗಿವೆಯೋ ಆ ಶ್ರೀ ಹರಿಯೇ ನನಗಷ್ಟೇ ಅಲ್ಲ ನಿನಗೂ ಬಲವನ್ನು ಕೊಡುವವನಾಗಿದ್ದಾನೆಂದು ಹೇಳುತ್ತಾರೆ.

ಪ್ರಹ್ಲಾದರಾಜರ ಭಕ್ತಿಗೆ ಮೆಚ್ಚಿದ ಭಗವಂತ ನೃಸಿಂಹರೂಪವನ್ನು ತೆಗೆದು ಕೊಂಡು ಸ್ತಂಭದಿಂದ ಹೊರಬಂದು–

ದ್ವಾರ್ಯೂರ್ರಾವಾಪಾತ್ಯದದಾರ ಲೀಲಯಾ
ನಖೈರ್ಯಥಾಹಿಂ ಗರುಡೋ ಮಹಾವಿಷಮ್॥ (ಶ್ರೀ ಭಾಗವತ ೭-೮-೩೦)

ಗರುಡನು ಮಹಾವಿಷಪೂರಿತ ಸರ್ಪವನ್ನು ಕೊಕ್ಕಿನಿಂದ ಸೀಳುವಂತೆ ಭಗವಂತನು ಹೊಸ್ತಿಲಲ್ಲಿ ಕುಳಿತು ತೊಡೆಯ ಮೇಲೆ ಆ ದೈತ್ಯನನ್ನು ಹಾಕಿಕೊಂಡು ಲೀಲಾಜಾಲ ವಾಗಿ ತನ್ನ ಉಗುರುಗಳಿಂದ ಸೀಳಿ ಸಂಹರಿಸಿದನು.

ತರುಣಿ ದ್ರೌಪದಿ ಮೊರೆಯಿಡಲಾಕ್ಷಣ
ಭರದಿಂದಕ್ಷಯವಿತ್ತ ಮಹಾತ್ಮನ ॥ ೩ ॥

ಕೌರವನ ತುಂಬಿದ ಸಭೆಯಲ್ಲಿ ದುಃಶ್ಯಾಸನನು ದ್ರೌಪದೀ ದೇವಿಯರ ಸೀರೆ ಯನ್ನು ಸೆಳೆದು ಮಾನಭಂಗ ಮಾಡಲು ಪ್ರಯತ್ನಿಸಿದ. ಆಗ ದ್ರೌಪದೀದೇವಿಯರು ಪರಮಾತ್ಮನಿಗೆ ರಕ್ಷಿಸಬೇಕೆಂದು ಮೊರೆಯಿಟ್ಟು ಸ್ಮರಿಸಲು ಅವರು ಉಟ್ಟ ವಸ್ತ್ರವನ್ನು ಅಕ್ಷಯ ಮಾಡಿ ಮಾನವನ್ನು ಕಾಯ್ದಂಥ ಶ್ರೀ ಹರಿಯ ಸ್ಮರಣೆಯನ್ನು ನಿರಂತರ ಮಾಡಬೇಕು ಎನ್ನುತ್ತಾರೆ ಶ್ರೀ ದಾಸರು.

ದ್ರೌಪದೀ ದೇವಿಯರು ಭಗವಂತನನ್ನು ಕುರಿತು ಮಾಡಿದ ಸ್ತೋತ್ರ ಹೀಗಿದೆ.

ಗೋವಿಂದ ದ್ವಾರಕಾವಾಸಿನ್ ಕೃಷ್ಣ ಗೋಪಿ ಜನಪ್ರಿಯ ।
ಕೌರವ್ಯೈಃ ಪರಿಭೂತಾಂ ಮಾಂ ಕಿಂ ನ ಜಾನಾಸಿ ಕೇಶವ ।
ಕೃಷ್ಣಕೃಷ್ಣ ಮಹಾಯೋಗಿನ್ ವಿಶ್ವಾತ್ಮನ್ ವಿಶ್ವಭಾವನ ।
ಪ್ರಪನ್ನಾಂ ಪಾಹಿ ಗೋವಿಂದ ಕುರುಮಧ್ಯೇಽವಸೀದತೀಮ್

(ಶ್ರೀಮನ್‌ಮಹಾಭಾರತ)

ಓ ಗೋವಿಂದ! ದ್ವಾರಕಾನಾಥ! ನನ್ನ ಮಾನವನ್ನು ಅಪಹರಿಸುವುದಕ್ಕಾಗಿ ಈ ದುಷ್ಟ ಕೌರವರು ಯತ್ನಿಸುತ್ತಿದ್ದಾರೆ. ಇದು ನಿನಗೆ ತಿಳಿಯದೆ ? ನಿನ್ನನ್ನೇ ಶರಣು ಹೊಂದಿದ ನನ್ನನ್ನು ಕಾಪಾಡು. ಹೀಗೆ ದ್ರೌಪದೀದೇವಿಯರು ಅನನ್ಯವಾಗಿ ಬೇಡುತ್ತ ಸ್ಮರಿಸುತ್ತಿರಲು ಶ್ರೀ ಕೃಷ್ಣನು ಅವರಿಗೆ ಅಕ್ಷಯಾಂಬರವನ್ನಿತ್ತು ರಕ್ಷಿಸಿದ.

ಅಂದು ಅಜಾಮಿಳ ಕಂದನ ಕರೆಯಲು
ಬಂದು ಸಲಹಿ ಆನಂದವ ತೋರಿದ ॥ ೪ ॥

ದಾಸಿಯ ಸಂಗದಿಂದ ದೂಷಿತನಾದ ಅಜಾಮಿಳನು ತನ್ನ ಅಂತ್ಯ ಕಾಲವು ಸಮೀಪಿಸುತ್ತಿರಲು ಆಟದಲ್ಲಿ ಮಗ್ನನಾದ ನಾರಾಯಣನೆಂಬ ಹೆಸರುಳ್ಳ ಮಗನನ್ನು ಕರೆದನು. ಅರ್ಥಾನುಸಂಧಾನ ಪೂರ್ವಕ ಮಾಡಿದ ಈ ನಾರಾಯಣ ಸ್ಮರಣೆಯಿಂದ ವಿಷ್ಣುಪಾರ್ಷದರು ಬಂದು ಅವನನ್ನು ಯಮನ ಪಾಶಗಳಿಂದ ಬಿಡಿಸಿದರು.

ಹೀಗೆ ಪರಮಾತ್ಮನು ಅಂತ್ಯ ಕಾಲದಲ್ಲಿ ಅರ್ಥಾನು ಸಂಧಾನಪೂರ್ವಕ ತನ್ನ ನಾಮ ಸ್ಮರಣೆ ಮಾಡಿದ ಅಜಾಮಿಳನನ್ನು ಉದ್ಧರಿಸಿ ಕ್ರಮೇಣ ಆನಂದ ಎಂದರೆ ಮೋಕ್ಷ ವನ್ನು ಕೊಟ್ಟ ಪ್ರಸಂಗವು ಶ್ರೀಮದ್ ಭಾಗವದಲ್ಲಿ ನಿರೂಪಿತವಾಗಿದೆ.

ವಿಕ್ರುಶ್ಯ ಪುತ್ರ ಮಘವಾನ್ಯದಜಾಮಿಳೋಽಪಿ ।
ನಾರಾಯಣೇತಿ ಮ್ರಿಯಮಾಣ ಇಯಾಯ ಮುಕ್ತಿಂ ॥ (೬–೩–೨೪)

"ನಾರಾಯಣ" ನಾಮದ ಅರ್ಥಾನುಸಂಧಾನವನ್ನು ಹೀಗೆ ಮಾಡಬೇಕು–

೧ ನಾರಾಯಣ– ನ+ಅರ+ಅಯನ. (ಗುಣಪರಿಪೂರ್ಣತ್ವಾತ್- ನಾರಾಯಣಃ) ಅರ–ದೋಷಗಳು, ನ=ದೋಷ ವಿರುದ್ಧ ಗುಣಗಳಿಗೆ, ಅಯನ=ಆಶ್ರಯನು– ಗುಣಗಳಿಗೆ ಆಶ್ರಯನು ಅಂದರೆ–ಗುಣ ಪರಿಪೂರ್ಣನು ನಾರಾಯಣನು ಎಂದು ತಿಳಿಯಬೇಕು.

೨ ನಾರಾಯಣ– ಅರ=ದೋಷಗಳಿಗೆ ಆಶ್ರಯನು ಅಯನ-ಆಶ್ರಯನು ನ–ಅಲ್ಲ ದೋಷವರ್ಜಿತತ್ವಾತ್– ನಾರಾಯಣಃ

ದೋಷಗಳಿಗೆ ಆಶ್ರಯನಲ್ಲವಾದ್ದರಿಂದ ನಾರಾಯಣನು ಎಂದು ತಿಳಿಯಬೇಕು.

೩ ನಾರಾಯಣ– ನರ=ಮುಕ್ತಿಯೋಗ್ಯ ಜೀವರು– ಅವರಿಗೆ ಸಂಬಂಧ ಪಟ್ಟಿರುವದು–

ನಾರ= ಜ್ಞಾನ (ಭಗವಂತನ ತತ್ವಜ್ಞಾನ) ಇದಕ್ಕೆ–
ಅಯನ= ವಿಷಯನಾಗಿ ಆಶ್ರಯನಾದ್ದರಿಂದ ನಾರಾಯಣನು–
ಮುಕ್ತಿಯೋಗ್ಯಾನಾಂ ಜ್ಞಾನವಿಷಯತ್ವಾತ್=ನಾರಾಯಣಃ

೪ ನಾರಾಯಣ= ಅರ=ದೋಷಗಳು, ನ+ಅರ=ದೋಷರಹಿತರು=ಮುಕ್ತರು.
ಅವರಿಗೆ ಅಯನ - ಆಶ್ರಯನು ನಾರಾಯಣನು–
ಮುಕ್ತಾಶ್ರಯತ್ವಾತ್=ನಾರಾಯಣಃ

ಮುಕ್ತರಿಗೆ ಆಶ್ರಯನಾದ್ದರಿಂದ ಭಗವಂತನು ನಾರಾಯಣನೆಂದು ತಿಳಿಯಬೇಕು.

ಶ್ರೀಶ ಪುರಂದರ ವಿಠ್ಠಲರಾಯನ
ಸೃಷ್ಟಿಗೊಡೆಯನ ಮುಟ್ಟಿ ಭಜಿಸಿ ನೀ ॥ ೫ ॥

ಶ್ರೀ ಪುರಂದರವಿಠ್ಠಲನು ಶ್ರೀ ಲಕ್ಷ್ಮೀದೇವಿಯರಿಗೂ ಒಡೆಯನಾಗಿದ್ದಾನೆ. ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಮುಂತಾದವು ಅವನಿಂದಲೇ ಆಗುತ್ತವೆ. ಇಂಥ ಭಗವಂತನನ್ನು ಮನಮುಟ್ಟಿ ಭಕ್ತಿಪೂರ್ವಕ ಸ್ಮರಿಸಿದಲ್ಲಿ ಮುಕ್ತಿದೊರೆಯುವದು ನಿಶ್ಚಿತ.

ಭಗವಂತನು "ಶ್ರೀಶ" ನಾಗಿದ್ದಾನೆ. ಇದು ಹೀಗೆ ತಿಳಿದುಬರುತ್ತದೆ.

೧ ಶ್ರಿಯಃ ಲಕ್ಷ್ಮ್ಯಾಃ ಈಶಃ ಶ್ರೀಶಃ ।
ಶ್ರೀ ಲಕ್ಷ್ಮೀದೇವಿಯರಿಗೆ ಒಡೆಯನಾದ್ದರಿಂದ ಭಗವಂತನು ಶ್ರೀಶನಾಗಿದ್ದಾನೆ.

೨ ಶ್ರಿಯಃ ಶಂ ಸುಖಂ ಯಸ್ಮಾತ್ ಸಃ ಶ್ರೀಶಃ ।
ಶ್ರೀ ಲಕ್ಷ್ಮೀದೇವಿಯರಿಗೆ ಸುಖವನ್ನು ಅನುಗ್ರಹಿಸುವವನಾದ್ದರಿಂದ ಅವನು "ಶ್ರೀಶ".

ಶ್ರೀಲಕ್ಷ್ಮೀದೇವಿಯರು "ಮಮಯೋನಿಃ ಅಪ್ಸು ಅಂತಃ ಸಮುದ್ರೇ" ಎಂದಾಗಿ ಶ್ರೀ ಅಂಭೃಣೀಸೂಕ್ತದಲ್ಲಿ ) ಹೇಳಿಕೊಂಡಿರುವದರಿಂದ ಭಗವಂತನು ಅವರಿಗೂ ಒಡೆಯನಾಗಿದ್ದಾನೆ. ಆ ಕಾರಣದಿಂದ "ಶ್ರೀಶ" ನೆಂದೆನಿಸಿದ್ದಾನೆ.

ಇನ್ನು ಭಗವಂತನು ಸೃಷ್ಟಿಗೊಡೆಯನೂ ಆಗಿದ್ದಾನೆ ಎನ್ನುವದು ಜನ್ಮಾದ್ಯಸ್ಯಯತಃ ಓಂ (ಬ್ರಹ್ಮಸೂತ್ರ ೧–೧–೨) ಸೂತ್ರದಲ್ಲಿ ಸೂತ್ರಕಾರರು ಭಗವಂತನು ಸೃಷ್ಟ್ಯಾದಿ ಅಷ್ಟಕರ್ತೃತ್ವಗಳನ್ನು ಹೊಂದಿದ್ದಾನೆಂದು ವಿವರಿಸಿದ್ದಾರೆ.



ಶ್ರೀಮದ್ಭಾಗವತದಲ್ಲಿ ಕೂಡ ಇದನ್ನು-

"ಜನ್ಮಾದ್ಯಸ್ಯಯತೋऽನ್ವಯಾದಿತರತಃ ಚಾರ್ಥೇಷು ಭಿಜ್ಞಃಸ್ವರಾಟ್"
ಎಂಬುದಾಗಿ ವರ್ಣಿಸಿದ್ದಾರೆ. (೧-೧-೧)

"ಯತೋವಾ ಇಮಾನಿ ಭೂತಾನಿ ಜಾಯಂತೇ" (ತೈತ್ತರೀಯ ಉಪನಿಷತ್ತು) ಇತ್ಯಾದಿ ಶ್ರುತಿಗಳಲ್ಲಿ ಕೂಡ ಆ ಭಗವಂತನೇ ಸೃಷ್ಟಿಯನ್ನು ಮಾಡತಕ್ಕವನು ಎಂದಾಗಿ ಹೇಳಿದ್ದಾರೆ.

ಇಂಥ ಭಗವಂತನನ್ನು ಮುಟ್ಟಿ ಭಜಿಸಬೇಕು. ಎನ್ನುತ್ತಾರೆ ಶ್ರೀದಾಸರು. ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಹೀಗೆ ಅಪ್ಪಣೆ ಕೊಡಿಸಿದ್ದಾನೆ.

ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ ।
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿತೇ ॥ (೧೦-೧೦)

ಯಾವಾಗಲೂ ನನ್ನಲ್ಲಿಯೇ ಮನಸ್ಸನ್ನು ಇಡುವ, ಭಕ್ತಿಪೂರ್ವಕವಾಗಿ ನನ್ನನ್ನೇ ಸ್ಮರಿಸುವವರಿಗೆ (ಸೇವಿಸುವವರಿಗೆ) ಯಾವುದರಿಂದ ನನ್ನನ್ನು ಹೊಂದುತ್ತಾರೆಯೋ ಅಂಥಾ ಜ್ಞಾನರೂಪವಾದ ಮೋಕ್ಷೋಪಾಯವನ್ನು ನಾನು ಕೊಡುತ್ತೇನೆ.

ಶ್ರೀಮದ್ಭಾಗವತದಲ್ಲಿ ಬರುವ "ಭಜಸರ್ವಾತ್ಮನಾ ಹರಿಮ್ (೪-೨೯-೭೯)

ಎಂಬ ಶ್ಲೋಕಭಾಗದ ಭಾವವನ್ನೇ ಶ್ರೀದಾಸರು "ಮುಟ್ಟಿ ಭಜಿಸುನೀ" ಎಂದಾಗಿ ತಿಳಿಸಿರುವದು ವೈಶಿಷ್ಟ್ಯಪೂರ್ಣವಾಗಿದೆ.

ಶ್ರೀಮದಾಚಾರ್ಯರೂ ಕೂಡ ಆ ಭಗವಂತನನ್ನು ಸರ್ವದಾ ಸ್ಮರಿಸಬೇಕು. ಎಂಬುದಾಗಿ "ಸದಾಚಾರ ಸ್ಮೃತಿ" ಗ್ರಂಥದಲ್ಲಿ ಹೀಗೆ ತಿಳಿಸಿದ್ದಾರೆ.

ಸ್ಮರ್ತವ್ಯಃ ಸತತಂ ವಿಷ್ಣುಃ ವಿಸ್ಮರ್ತವ್ಯೋ ನ ಜಾತುಚಿತ್ ।
ಸರ್ವೇ ವಿಧಿನಿಷೇಧಾಸ್ಯುಃ ಏತಯೋ ರೇವಕಿಂಕರಾಃ ॥

ಶ್ರೀ ಹರಿಯನ್ನು ಸಂತತವೂ ಸ್ಮರಿಸಬೇಕು. ಯಾವ ಕಾಲದಲ್ಲಿಯೂ ಮರೆಯಲಾಗದು.

ಅವಿಸ್ಮೃತಿಃ ಕೃಷ್ಣಪದಾರವಿಂದಯೋಃ
ಕ್ಷಿಣೋತ್ಯಭದ್ರಾಣಿ ಶಮಂತನೋತಿಚ ॥

(ಶ್ರೀಮದ್ಭಾಗವತ (೧೨-೧೨-೫೪)

ಶ್ರೀ ಕೃಷ್ಣನ ಪಾದಕಮಲಗಳ ಸ್ಮರಣೆಯು ಎಲ್ಲ ಅಮಂಗಲಗಳನ್ನು ನಾಶಮಾಡಿ ಸುಖವನ್ನು ತಂದುಕೊಡುತ್ತದೆ.



ಒಟ್ಟಿನಲ್ಲಿ ಶ್ರೀ ಹರಿಸ್ಮರಣಪೂರ್ವಕ (ಸರ್ವೋತ್ತಮತ್ವ, ಸರ್ವಕರ್ತೃತ್ವಗಳ ಸ್ಮರಣಪೂರ್ವಕ ಭಕ್ತಿಯಿಂದ) ಆಚರಿಸುವ ಎಲ್ಲ ಕರ್ಮಗಳು ಶ್ರೀ ಹರಿಪ್ರೀತಿ ಜನಕವಾಗುತ್ತವೆ. ಅಂದರೆ ಮೋಕ್ಷಕ್ಕೆ ಸಾಧನವೆಂದೆನಿಸುತ್ತವೆ. ಎಂಬುದಾಗಿ ಶ್ರೀ ಪುರಂದರದಾಸರು ಅಪ್ಪಣೆಕೊಡಿಸಿ ಸಜ್ಜನರನ್ನು ಉದ್ಧರಿಸಿದ್ದಾರೆ.

ಶ್ರೀ ಮಧ್ವೇಶಾರ್ಪಣಮಸ್ತು

॥ ಶ್ರೀಃ ॥

## "ಚಂಚಲಿಸದಿರು ಚತುರನಾಗು ಮನವೆ"

### ಶ್ರೀ ಪ್ರಸನ್ನವೆಂಕಟದಾಸರು

ಚಂಚಲಿಸದಿರು ಚತುರನಾಗೋ ಮನವೆ ।
ವಂಚನಿಲ್ಲದೇ ಹರಿಗೆ ಅರ್ಪಿಸೋ ಮನವೆ ॥ ಪ ॥

ಆರು ನಿನ್ನವರೆಂಬಿ ಅವರಗಲುವರೋ ಮುನ್ನ
ಭೂರಿ ಸಂಚಿತ ಸಂಪದೆರವಾಗ್ವದೋ ।
ಜಾರುತಿದೆ ಆಯುಷ್ಯಕ್ಷಣಲವ ಎನಗೊಡದೇ
ನಾರಸಿಂಹನ ನಂಬೋ ನಿಷ್ಠೆಯಲಿ ಮನವೇ ॥ ೧ ॥

ಅಲ್ಪ ಸುಖಕಾಗಿ ನೀ ಅನೇಕ ಸುಖ ಮರೆವರೇ
ಕಲ್ಪ ಕಲ್ಪಕೆ ನಿರಯ ನುಣಿಸಬಹುದೋ ॥
ಅಲ್ಪರುಪದೇಶದಲಿ ಭ್ರಾಂತನಾಗದೇ ಶೇಷ
ತಲ್ಪನ್ನ ಮೊರೆ ಹೋಗೋ ಮರೆಯದಲೇ ಮನವೇ ॥ ೨ ॥

ನಿನ್ನಿಂದ ಭವಬಂಧನ ನಿನ್ನಿಂದ ಮೋಚನ
ನಿನ್ನಿಂದ ಪ್ರಸನ್ವೆಂಕಟೇಶ ನೊಲುಮೆ ॥
ಎನ್ನ ದಣಿಸದರಿಂದು ಇದರಿಂದ ತಪ್ಪಿದರೆ
ಘನ್ನ ಗುರುಮಧ್ವೇಶನಾಣೆನಿನಗಿಹುದು ॥ ೩ ॥

### ಶ್ರೀ ಮಧ್ವೇಶಾರ್ಪಣಮಸ್ತು

ಪ್ರಸ್ತುತ ಪದ್ಯದಲ್ಲಿ ಮನಸ್ಸು ಚಂಚಲವಾದದ್ದು. ಈ ಮನಸ್ಸು ಬಂಧ ಹಾಗೂ ಮೋಕ್ಷಗಳೆರಡಕ್ಕೂ ಕಾರಣವಾಗಿದೆ, ಹೇಗೆಂದರೆ-ಸಂಸಾರದಲ್ಲಿಯೇ ಮನಸ್ಸಿಟ್ಟು ಜೀವನ ನಡೆಸುವ ಮಾನವರಿಗೆ ಇದು ಬಂಧಕ್ಕೆ ಕಾರಣವಾಗುತ್ತದೆ. ಅದೇ ಮನಸ್ಸು ಶ್ರೀಹರಿಯಲ್ಲಿ ಅರ್ಪಿತವಾದರೆ ಮೋಕ್ಷಕ್ಕೆ ಕಾರಣವಾಗುತ್ತದೆ ಎಂಬ ತತ್ವವನ್ನು ಪ್ರತಿಪಾದಿಸಲಾಗಿದೆ.

ಚಂಚಲಿಸದಿರು ಚತುರನಾಗು ಮನವೆ !

ಮನಸ್ಸು ಸ್ವಭಾವತಃ ಅತಿ ಚಂಚಲವಾದದ್ದು. ವೇಗವಾಗಿ ಓಡುವಂತಹದು. **"Mind is fleeter than wind"** ಎಂಬ ಇಂಗ್ಲೀಷ ಗಾದೆಯು ಇದನ್ನೇ ತಿಳಿಸುತ್ತದೆ. ಮಾನವನ ಮನಸ್ಸು ಮಂಗನಂತೆ ಒಂದು ವಿಷಯದಿಂದ ಇನ್ನೊಂದು ವಿಷಯಕ್ಕೆ ನೆಗೆಯುತ್ತಲೇ ಇರುತ್ತದೆ.

ಶ್ರೀ ಭಗವದ್ಗೀತೆಯಲ್ಲಿ ಅರ್ಜುನನು ಶ್ರೀಕೃಷ್ಣನನ್ನು ಕುರಿತು ಹೇಳುತ್ತಾನೆ.

ಚಂಚಲಂಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಂ ।
ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ ॥ (೬-೩೪)

ಶ್ರೀಕೃಷ್ಣ ! ಮನಸ್ಸು ಅತಿ ಚಂಚಲವಾದುದು. ದೇಹೇಂದ್ರಿಯಗಳಿಗೆ ಕ್ಷೋಭೆಯನ್ನು ಉಂಟು ಮಾಡುತ್ತದೆ. ಜಯಿಸುವದಕ್ಕೆ ಅಶಕ್ಯವಾಗಿದೆ. ಈ ಮನಸ್ಸಿನ ನಿಗ್ರಹವು ಗಾಳಿಯ ನಿಗ್ರಹದಂತೆ ಕಠಿಣವಾದುದು.

ಆಹಾರ ಪ್ರಭವಾಃ ಪ್ರಾಣಾ ಮನೋದುರ್ನಿಗ್ರಹಂ ಚಲಮ್ । ಎಂಬುದಾಗಿ ಶ್ರೀಮನ್‌ಮಹಾಭಾರತದ ವನಪರ್ವದಲ್ಲಿ ತಿಳಿಸಿದ್ದನ್ನು ಇಲ್ಲಿ ಸ್ಮರಿಸಬಹುದು.

ಈ ಮನಸ್ಸು ಚಂಚಲವೆಂಬ ವಿಷಯವನ್ನು ಉಪನಿಷತ್ತುಗಳಲ್ಲಿ ಕೂಡ ಹೀಗೆ ತಿಳಿಸಿದ್ದಾರೆ.

೧ ಮನಶ್ಚೈವಾತಿ ಚಂಚಲಮ್ — ಅಮೃತನಾದೋಪನಿಷತ್

೨ ನ ಶಕ್ಯತೇ ಮನೋ ಜೇತುಮ್ — ಮುಕ್ತಿಕೋಪನಿಷತ್–

ಗೀತೆಯಲ್ಲಿ ಶ್ರೀಕೃಷ್ಣನು ಇನ್ನೊಂದು ಕಡೆ– "ಮನಶ್ಚಂಚಲಮಸ್ಥಿರಮ್" (೬-೨೬) ಎಂಬುದಾಗಿ ಹೇಳಿದ್ದುಂಟು.

ಈ ಮನಸ್ಸಿನ ವಾಸ್ತವಿಕ ಸ್ವರೂಪವನ್ನು ಕಠೋಪನಿಷತ್ತು ಚೆನ್ನಾಗಿ ತಿಳಿಸಿ ಕೊಡುತ್ತದೆ.

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವತು ।
ಬುದ್ಧಿಂತು ಸಾರಥಿಂ ವಿದ್ಧಿ ಮನಃ ಪ್ರಗ್ರಹ ಮೇವ ಚ ।
ಇಂದ್ರಿಯಾಣಿ ಹಯಾನಾಹುಃ ವಿಷಯಾಂ ಸ್ತೇಷು ಗೋಚರಾನ್ (೩-೩)

ಆತ್ಮನು ರಥಿಕನೆಂದು, ಶರೀರವನ್ನು ರಥವೆಂದು, ಬುದ್ಧಿಯನ್ನು ಸಾರಥಿಯೆಂದು ಮನಸ್ಸನ್ನೇ (ಕಡಿವಾಣ) ಲಗಾಮುವೆಂದು, ಇಂದ್ರಿಯಗಳೇ ಕುದುರೆಗಳೆಂದು ಹಾಗೂ ವಿಷಯ ಪ್ರಪಂಚವೇ ಅವು ತಿರುಗಾಡುವ ಸ್ಥಾನಗಳೆಂದು ತಿಳಿಯತಕ್ಕದ್ದು.

ಇದನ್ನೇ ಶ್ರೀಮನ್‌ಮಹಾಭಾರತದಲ್ಲಿ–

ರಥಂ ಶರೀರಂ ಪುರುಷಸ್ಯ ದೃಷ್ಟ
ಮಾತ್ಮಾ ನಿಯಂತೇಂದ್ರಿಯಾಣ್ಯಾಹುರಶ್ವಾನ್ ।
ತೈರ ಪ್ರಮತ್ತಃ ಕುಶಲೀ ಸದಶ್ವೈ-
ರ್ದಾಂತೈಃ ಸುಖಂ ಯಾತಿ ರಥೀವ ಧೀರಃ ॥ (ವನಪರ್ವ)

ಮತ್ತು ಇಂದ್ರಿಯಾಣಾಂ ವಿಚರತಾಂ ಯನ್ಮನೋಽನುವಿಧೀಯತೇ ।
ತದಸ್ಯ ಹರತೇ ಬುದ್ಧಿಂ ನಾವಂ ವಾಯುರಿವಾಂಭಸಿ ॥

ಈ ಶ್ಲೋಕದ್ವಯಗಳಿಂದ ತಿಳಿಸಿಕೊಟ್ಟಿದ್ದಾರೆ-

ಮನಸ್ಸು ಐದು ಇಂದ್ರಿಯಗಳಿಗಿಂತಲೂ ಮೇಲಿನದು. ಚಂಚಲತೆಯು ಇಂದ್ರಿಯಗಳ ಸ್ವಭಾವ. ಆಯಾ ಇಂದ್ರಿಯಗಳು ತಮಗೆ ಬೇಕಾದ ವಸ್ತುವಿಷಯಗಳನ್ನು ಪ್ರತಿಕ್ಷಣದಲ್ಲಿ ಅಪೇಕ್ಷಿಸುತ್ತವೆ. ಅಪೇಕ್ಷಿತವಾದ ವಸ್ತುಗಳನ್ನು ಪಡೆಯಲು ಇಂದ್ರಿಯಗಳು ಮನಸ್ಸನ್ನು ಪ್ರೇರೇಪಿಸುತ್ತವೆ. ಈ ಸಂದರ್ಭದಲ್ಲಿ ಮನಸ್ಸು ಇಂದ್ರಿಯಗಳ ಪ್ರೇರಣೆಗೆ ಒಲಿದು ಇಂದ್ರಿಯಗಳಿಗೆ ಅಧೀನವಾಗಿ ಕಾರ್ಯಪ್ರವರ್ತಿತವಾಗುತ್ತದೆ. ಬುದ್ಧಿಯು ಸಹ ಮನಸ್ಸಿನೊಡನೆ ಸೇರಿ ಹೋಗುತ್ತದೆ. ಅರ್ಥಾತ್ ಮನಸ್ಸು ಬುದ್ಧಿಯ ಕಾರ್ಯವಾದ ವಿವೇಚನೆಯನ್ನು ಮಾಡದಂತೆ ತಡೆಯುತ್ತದೆ. ಬಿರುಗಾಳಿಯು ಸಮುದ್ರದಲ್ಲಿರುವ ನಾವೆಯನ್ನು ಅಸ್ಥಿರಗೊಳಿಸುವಂತೆ ಮನಸ್ಸು ಬುದ್ಧಿಯನ್ನು ಅಸ್ಥಿರಗೊಳಿಸುತ್ತದೆ. ಅದೇ ಮನಸ್ಸು ಇಂದ್ರಿಯಗಳ ವಶವಾಗದಿದ್ದರೆ ಬುದ್ಧಿಯೊಡನೆ ಸೇರಿ ಜೀವನನ್ನು ಪರಮಪದಕ್ಕೊಯ್ಯಲು ಸಮರ್ಥವಾಗುತ್ತದೆ.

ಇದನ್ನೇ ಶ್ರೀಮದ್‌ಭಾಗವತದಲ್ಲಿ-

ಆಹುಃ ಶರೀರಂ ರಥಮಿಂದ್ರಿಯಾಣಿ ಹಯಾನ ಭೀಷುಂ
ಮನ ಇಂದ್ರಿಯೇಶವರ್ ॥ (೭-೧೫-೪೧) ಎಂಬ ಶ್ಲೋಕಭಾಗದಿಂದ ತಿಳಿಸಿದ್ದಾರೆ.

ಇಂಥ ಚಂಚಲವಾದ ಮನಸ್ಸನ್ನು ಗೆಲ್ಲುವದು ಅವಶ್ಯವೇ ಆಗಿದೆ.

"ಮನವನ್ನು ಗೆದ್ದವನು ಮಹಿಯನ್ನು ಗೆದ್ದಾನು" ಎಂಬ ಗಾದೆಯ ಮಾತಿನಂತೆ ಮನಸ್ಸನ್ನು ಜಯಿಸಿದರೆ ಈ ಭೂಮಿಯನ್ನೇ ಗೆಲ್ಲುವದು ಸಾಧ್ಯವೆಂದು ಹೇಳಬಹುದು.

ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೀಗೆ ತಿಳಿಸಿದ್ದಾನೆ.

"ಅಭ್ಯಾಸೇನತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ" ಎಂಬಂತೆ

ಕ್ರಮಕ್ರಮವಾಗಿ ಮನಸ್ಸನ್ನು ನಿಯಂತ್ರಿಸುವ ಅಭ್ಯಾಸ ಮಾಡುವದರಿಂದ ಮತ್ತು ವಿಷಯ ಪದಾರ್ಥಗಳಲ್ಲಿ ಸ್ನೇಹವನ್ನು ಬಿಡುವದರಿಂದ ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳಬಹುದು.

ಶ್ರೀಮದ್ಭಾಗವತದಲ್ಲಿ-

ಯಶ್ಚಿತ್ತ ವಿಜಯೇಚ್ಛುಃ ಸ್ಯಾನ್ನಿಸ್ಸಂಗೋ ನಿಷ್ಪರಿಗ್ರಹಃ ॥ ಶ್ಲೋಕದಿಂದ ದುರ್ವಿಷಯಗಳಲ್ಲಿ ಸ್ನೇಹವನ್ನು ಮಾಡದೇ ಇರುವವನು ಮನಸ್ಸಿನ ಮೇಲೆ ವಿಜಯ ಸಾಧಿಸಬಹುದಾಗಿದೆಯೆಂದು ತಿಳಿಸಿರುವರು.

ಈ ಮನಸ್ಸು ಚಾಂಚಲ್ಯ ರಹಿತವಾಗಿರಬೇಕು. ಅಷ್ಟೇ ಅಲ್ಲ ಚತುರವಾಗಿರಬೇಕು. ಮನಸ್ಸು ಚತುರವಾಗಿರುವದೆಂದರೆ, ವಿಷಯ ಪದಾರ್ಥಗಳಲ್ಲಿ ಹರಿದಾಡದೇ ಪರಮಾತ್ಮನ ಧ್ಯಾನದಲ್ಲಿ ಸರ್ವದಾ ನೆಲೆಸಿರುವುದಾಗಿದೆ ಎಂದು ಹೇಳಬಹುದು.

ಇನ್ನು "ವಂಚನಿಲ್ಲದೆ ಹರಿಗೆ ಅರ್ಪಿಸೋ ಮನವೇ" ಎಂಬಲ್ಲಿ ದಾಸರು ಮನಸ್ಸನ್ನು ಶ್ರೀ ಹರಿಯ ಪಾದಾರವಿಂದಗಳಲ್ಲಿ ನಿರ್ವಂಚನೆಯಿಂದ ಅರ್ಪಿಸಬೇಕು. ಎಂಬುದಾಗಿ ತಿಳಿಸುತ್ತಾರೆ.

"ಮನವನಿತ್ತರೆ ತನ್ನನೀವನು" ಎಂಬ (ಶ್ರೀಹರಿಕಥಾಮೃತಸಾರ) ಆರ್ಯೋಕ್ತಿಯಂತೆ ಮನಸ್ಸನ್ನು ಶ್ರೀಹರಿಗೆ ಅರ್ಪಿಸಿದ್ದೇ ಆದರೆ ಭಗವಂತನು ತನ್ನ ಭಕ್ತರಿಗೆ ಮೋಕ್ಷವನ್ನು ಕೊಡುವದು ನಿಶ್ಚಿತ.

"ವಂಚನಿಲ್ಲದೇ ಹರಿಗೆ ಅರ್ಪಿಸೋ ಮನವೇ" ಎನ್ನುವಲ್ಲಿ ದಾಸರ ಮನೋಭಾವ ಇಂತಿದೆ.

ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಹೀಗೆ ಹೇಳುತ್ತಾನೆ.

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್ ।
ಯತ್ತಪಸ್ಯಸಿ ಕೌಂತೇಯ ತತ್‌ಕುರುಷ್ವಮದರ್ಪಣಮ್ ॥ (೯-೨೭)

ಈ ಶ್ಲೋಕದಿಂದ ನಾವು ಮಾಡುವ ಕಾರ್ಯಗಳನ್ನು "ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮಚಾಖಿಳಂ" ಎಂಬ ಅನುಸಂಧಾನ ಪೂರ್ವಕಮಾಡಿ (ಅಹಂ ಮಮಕಾರಗಳನ್ನು ತೊರೆದು) ಪರಮಾತ್ಮನ ಪ್ರೀತಿಗೋಸ್ಕರ ಅರ್ಪಿಸುವದು ಸರಿಯಾದದ್ದು ಎಂದಾಗಿ ತಿಳಿಸಿರುವನು.

ಎಲ್ಲ ನಿತ್ಯದ ಕರ್ಮಗಳನ್ನು ಮೇಲೆ ತಿಳಿಸಿದಂತೆ ಮಾಡಿದರೆ ವಂಚನೆಯಿಲ್ಲದೆ ಅರ್ಪಿಸಿದಂತೆ ಆಗುತ್ತದೆ.

ಈ ಮನಸ್ಸನ್ನು ಶ್ರೀಹರಿಗೆ ಅರ್ಪಿಸುವದರ ಔಚಿತ್ಯ ಹೀಗಿದೆ.

ಕ್ರಿಯಾಸು ಯಸ್ತ್ವಚ್ಚರಣಾರವಿಂದಯೋಃ
ಆವಿಷ್ಟ ಚಿತ್ತೋ ನ ಭವಾಯ ಕಲ್ಪತೇ ॥ (ಶ್ರೀ ಭಾಗವತ (೧೦-೩-೩೮)

ಕರ್ಮಗಳನ್ನು ಮಾಡುವಲ್ಲಿ ಯಾರು ಪರಮಾತ್ಮನ ಪಾದಾರವಿಂದಗಳಲ್ಲಿ ಇಡಲ್ಪಟ್ಟ ಮನಸ್ಸುಳ್ಳವರೋ ಅವರು ಸಂಸಾರ ಬಂಧನಕ್ಕೆ ಒಳಗಾಗುವದಿಲ್ಲ. ಅಂದರೆ ಮೋಕ್ಷ ಮಾರ್ಗವನ್ನೇ ಹೊಂದುತ್ತಾರೆ.

ಶ್ರೀಕೃಷ್ಣನು ಕೂಡ ಭಗವದ್ಗೀತೆಯಲ್ಲಿ-

ಮಯ್ಯೇವ ಮನ ಆಧತ್ಸ್ವಮಯಿ ಬುದ್ಧಿಂ ನಿವೇಶಯ ॥ (೧೨-೮)

'ನನ್ನಲ್ಲಿಯೇ ಮನಸ್ಸನ್ನು ಇಡು' ಎಂದಾಗಿ ತಿಳಿಸಿದ ಪ್ರಯುಕ್ತ ಶ್ರೀಹರಿಗೆ ಈ ಮನಸ್ಸನ್ನು ಅರ್ಪಿಸುವದು ಯೋಗ್ಯವೆಂದು ಸಿದ್ಧವಾಗುತ್ತದೆ.

ಆರು ನಿನ್ನವರೆಂಬಿ ಅವರಗಲುವರೋ ಮುನ್ನ
ಭೂರಿ ಸಂಚಿತ ಸಂಪದೆರವಾಗ್ವದೋ ॥
ಜಾರುತಿದೆ ಆಯುಷ್ಯಕ್ಷಣಲವ ಎನಗೊಡದೇ
ನಾರಸಿಂಹನ ನಂಬೋ ನಿಷ್ಠೆಯಲಿ ಮನವೇ ॥ ೧ ॥

ಈ ಪ್ರಪಂಚದಲ್ಲಿ ಇವರು ಮೊದಲು ಇವರು ನಂತರ ಮರಣ ಹೊಂದುತ್ತಾರೆಂಬುದನ್ನು ಹೇಳಲು ಸಾಧ್ಯವಿಲ್ಲ. ಯಾರು ನಮ್ಮವರು ಎಂಬುದಾಗಿ ಭಾವಿಸುತ್ತೇವೆಯೋ. ಅವರು ಮೊದಲು ಮರಣವನ್ನು ಹೊಂದುತ್ತಾರೆ. ಕೂಡಿಟ್ಟ ಹಣವು, ಸಂಪತ್ತು ಒಂದು ದಿನ ನಾಶವಾಗುತ್ತದೆ. ಆಯುಷ್ಯವು ಕೂಡ ಕ್ಷಣ ಕ್ಷಣಕ್ಕೆ ಕಡಿಮೆಯಾಗುತ್ತದೆ. ಹೀಗಿರುವದರಿಂದ ಆ ಲಕ್ಷ್ಮೀನರಸಿಂಹನನ್ನು ನಿಷ್ಠೆಯಿಂದ ನಂಬಿ ಭಜಿಸುವದು ಅವಶ್ಯವೆಂಬುದಾಗಿ ಇಲ್ಲಿ ಶ್ರೀ ದಾಸರು ತಿಳಿಸಿದ್ದಾರೆ.

ಮೊದಲನೆಯದಾಗಿ- "ಆರು ನಿನ್ನವರೆಂಬಿ ಅವರಗಲುವರೋ ಮುನ್ನ" ಎಂದಿದ್ದಾರೆ.

ಇಲ್ಲಿ ಯಾರು ನಮ್ಮವರೆಂದು ಭಾವಿಸುತ್ತೇವೆಯೋ ಅವರು ಮೊದಲು ಸಾಯುತ್ತಾರೆ ಎಂಬುದಾಗಿ ಹೇಳಿದ್ದಾರೆ. ಇದಕ್ಕೆ ಕಾರಣವನ್ನು ಶ್ರೀಮದ್‌ಭಾಗವತದಲ್ಲಿ ತಿಳಿಸಿದ್ದಾರೆ.

ನ ಹಿ ಕ್ರಮಶ್ಚೇದಿಹ ಮೃತ್ಯುಜನ್ಮನೋ
ಶರೀರಿಣಾಮಸ್ತು ತದಾತ್ಮಕರ್ಮಭಿಃ ॥ (೬-೧೪ ೫೪)

ಶರೀರಧಾರಿಗಳಾದ ಜೀವರಿಗೆ, ಈ ಭೂಲೋಕದಲ್ಲಿ ಜನನ ಮರಣಗಳ ವಿಷಯದಲ್ಲಿ ಬಂದ ಕ್ರಮವೇ ಆಗಬೇಕೆಂಬುದಿಲ್ಲ. ತಮ್ಮ ತಮ್ಮ ಪಾಪಗಳ ನಿಮಿತ್ತದಿಂದ ಸೃಷ್ಟಿಯ ವಿಪರೀತ ಕ್ರಮದಿಂದ ಮರಣವು ಬರುತ್ತದೆ.

ಯಾರು ನಮಗೆ ಪ್ರಿಯರಾದವರೋ ಅವರ ವಿಯೋಗವು ಉಂಟಾಗುತ್ತದೆ. ಯಾರು ಅಪ್ರಿಯರೋ ಅವರ ಸಂಯೋಗವು ಆಗುತ್ತದೆ. ಇದೆಲ್ಲವೂ ನಡೆಯುವದು ಪರಮಾತ್ಮನ ಇಚ್ಛೆಯಿಂದಲೇ. ಈ ದುಃಖದ ನಿವಾರಣೆಗೆ ಶ್ರೀ ನರಸಿಂಹನನ್ನೇ ಮೊರೆ ಹೋಗಬೇಕು.

ಶ್ರೀ ಪ್ರಹ್ಲಾದರಾಜರು ಶ್ರೀ ನರಸಿಂಹ ದೇವರನ್ನು ಕುರಿತು ಪ್ರಾರ್ಥನೆ ಮಾಡಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಯಸ್ಮಾತ್ ಪ್ರಿಯಾ ಪ್ರಿಯವಿಯೋಗ ಸುಯೋಗ
ಜನ್ಮ ಶೋಕಾಗ್ನಿನಾ ಸಕಲ ಯೋನಿಷು ದಹ್ಯಮಾನಃ ।
ದುಃಖೌಷಧಂ ತದಪಿ ದುಃಖಮತದ್ಧಿಯಾಹಂ
ಭೂಮನ್ ಭ್ರಮಾಮಿ ವದಮೇ ತವ ದಾಸ್ಯಯೋಗಂ ॥
(ಶ್ರೀಮದ್‌ಭಾಗವತ ೭–೧೯–೧೭)

"ನಾನು ಯಾವುದೇ ಯೋನಿಯಲ್ಲಿ ಹುಟ್ಟಿದರೂ ಪ್ರಿಯವಿಯೋಗ, ಅಪ್ರಿಯ ಸಂಯೋಗಗಳು ಆಗುತ್ತವೆ. ಇದು ದುಃಖಕ್ಕೆ ಕಾರಣವಾಗಿದೆ. ದುಃಖಾಗ್ನಿಯಿಂದ ಬೆಂದು ಹೋಗಿದ್ದೇನೆ. ಭಗವಂತನ ಚಿಂತನೆಯೇ ಪರಮೌಷಧವೆಂಬುದನ್ನು ಮರೆತು ಬೇರೆ ಔಷಧಿಗಳು ದುಃಖ ಪರಿಹಾರಕವೆಂದು ಭ್ರಮಿಸಿದ್ದೇನೆ. ಇದರಿಂದಾಗಿ ಸಂಸ್ಕಾರದಲ್ಲಿ ಸುತ್ತುತ್ತಿದ್ದೇನೆ. ಹೇ ಸುಖಪೂರ್ಣನಾದ ನೃಸಿಂಹ ! ನಿನ್ನ ಪಾದಾರವಿಂದಗಳಲ್ಲಿ ದಾಸ್ಯವನ್ನು ಕರುಣಿಸಿ ಕಾಪಾಡು :

ಇನ್ನು ಭೂರಿಸಂಚಿತ ಸಂಪದೆರವಾಗ್ವದೋ ಎಂಬಲ್ಲಿ ಹಣವನ್ನು ಕೂಡಿಟ್ಟರೆ ಅದು ಒಂದಿಲ್ಲೊಂದು ದಿನ ನಾಶವಾಗುವದು ನಿಶ್ಚಿತ ಎಂದಾಗಿ ತಿಳಿಸುತ್ತಾರೆ. ಈ ಹಣವನ್ನು (ಸಂಪತ್ತನ್ನು) "ಧರ್ಮಾಯ ಯಶಸೇಽರ್ಥಾಯ ಕಾಮಾಯ ಸ್ವಜನಾಯಚ"ಎಂಬ ಶ್ರೀಮದ್‌ಭಾಗವತ ವಾಕ್ಯದಂತೆ ಧರ್ಮಾರ್ಥಕಾಮಗಳಲ್ಲಿ ಸದ್ವಿನಿಯೋಗ ಮಾಡಬೇಕಾದುದು ಅವಶ್ಯವಾಗಿದೆ.

ಹಣವನ್ನು ಸಂಗ್ರಹಿಸಿಡುವದು ಅಪಾಯಕಾರಿಯೆಂಬ ವಿಷಯವು ಹೀಗೆ ತಿಳಿದು ಬರುತ್ತದೆ.

ದಾತವ್ಯಂ ಭೋಕ್ತವ್ಯಂ ವಿಭವೇ ಸತಿಸಂಚಯೋನ ಕರ್ತವ್ಯಃ ।
ಪಶ್ಯೇಹ ಮಧುಕರೀಣಾಂ ಸಂಚಿತಮರ್ಥಂ ಹರಂತ್ಯನ್ಯೇ ॥

ಐಶ್ವರ್ಯ ಸಂಪತ್ತುಗಳಿದ್ದಾಗ ದಾನ, ಭೋಗಾದಿಗಳನ್ನು ಮಾಡಬೇಕು. ಸಂಗ್ರಹಿಸಬಾರದು. ಜೇನ್ನೊಣಗಳು ಸಂಗ್ರಹಿಸಿಟ್ಟ ಜೇನನ್ನು ಇತರರು ಅಪಹರಿಸಿಬಿಡುವರು. ಇದನ್ನೇ ಸುಭಾಷಿತವೊಂದು ಸುಂದರವಾಗಿ ತಿಳಿಸುತ್ತದೆ.

ದಾನಂ ಭೋಗೋ ನಾಶಃ ತಿಸ್ರೋ ಗತಯೋ ಭವಂತಿ ವಿತ್ತಸ್ಯ ।
ಯೋ ನ ದದಾತಿ ನ ಭುಂಕ್ತೇತಸ್ಯ ತೃತೀಯಾ ಗತಿರ್ಭವತಿ ॥

ಸಂಪತ್ತಿನ ಗತಿಯು ೩ ವಿಧವಾಗಿದೆ. ಒಂದನೆ ಗತಿಯು ದಾನ. ಎರಡನೆ ಗತಿಯು ಉಪಭೋಗ. ಮೂರನೆಯದು ನಾಶ. ಯಾರು ದಾನಕೊಡುವದಿಲ್ಲವೋ ಸ್ವತಃ ಉಪಭೋಗ ಮಾಡುವದಿಲ್ಲವೋ ಅವರ ಸಂಪತ್ತು ನಾಶವಾಗುವದು ಖಂಡಿತ.

"ಜಾರುತಿದೆ ಆಯುಷ್ಯಕ್ಷಣಲವ ಎನಗೊಡದೇ"- ಎಂಬಲ್ಲಿ ಮನುಷ್ಯನ ಆಯುಷ್ಯವು ಕ್ಷಣಕ್ಷಣಕ್ಕೂ ಕಡಿಮೆಯಾಗುತ್ತ ಹೋಗುತ್ತದೆಂದು ತಿಳಿಸಿದ್ದಾರೆ.

"ಕ್ಷಿಪ್ರಂ ಹಿ ಆಯುಃ ಭ್ರಶ್ಯತೇ ಮಾನವಾನಾಮ್" ಎಂಬ ಶ್ರೀಮನ್ಮಹಾಭಾರತದ ಉಕ್ತಿಯಂತೆ ಮನುಷ್ಯರ ಆಯುಷ್ಯವು ಶೀಘ್ರಗತಿಯಿಂದ ನಾಶವಾಗುತ್ತಲೇ ಇರುತ್ತದೆಂದು ತಿಳಿದು ಬರುತ್ತದೆ.

ಶ್ರೀಮದ್ಭಾಗವತದಲ್ಲಿ ಮಾನವನ ಆಯುಷ್ಯವು ಕಳೆದುಹೋಗುವ ಬಗೆಯನ್ನು ಮಾರ್ಮಿಕವಾಗಿ ವಿವರಿಸಿದ್ದಾರೆ.

ಪುಂಸೋ ವರ್ಷಶತಂ ಹ್ಯಾಯುಃ ತದರ್ಧಂ ಚಾಜಿತಾತ್ಮನಃ ।
ನಿಷ್ಫಲಂ ಯದಸೌ ರಾತ್ರ್ಯಾಃಶೇತೇಽಂಧಂ ಪ್ರಾಪಿತಸ್ತಮಃ ॥ (೭-೬-೫)
ಮುಗ್ಧಸ್ಯ ಬಾಲ್ಯ ಕೌಮಾರ್ಯೇಃ ಕ್ರೀಡತೋ ಯಾತಿ ವಿಂಶತಿಃ ।
ಜರಯಾಗ್ರಸ್ತದೇಹಸ್ಯ ಯಾತ್ಯಕಲ್ಪಸ್ಯ ವಿಂಶತಿಃ ॥ (೭-೬-೬)
ದೂರಾಪೂರೇಣ ಕಾಮೇನ ಮೋಹೇನ ಚ ಬಲೀಯಸಾ ।
ಶೇಷಂ ಗೃಹೇಷು ಸಕ್ತಸ್ಯ ಪ್ರಮತ್ತಸ್ಯ ಅಪಯಾತಿ ಹಿ ॥ (೭-೬-೭)

"ಶತಾಯುಃ ಪುರುಷಃ" ಎಂಬಂತೆ ಮನುಷ್ಯನ ಆಯುಷ್ಯ ಪ್ರಮಾಣ ನೂರು ವರ್ಷಗಳು. ಜಿತೇಂದ್ರಿಯನಲ್ಲದವನ ಆಯುಷ್ಯ ೫೦ ವರ್ಷಗಳು ಮಾತ್ರ. (ಇವನು ಕುರುಡಾಗಿಸುವ ಕತ್ತಲೆಯನ್ನು ಹೊಂದಿ ರಾತ್ರಿಯಲ್ಲಿ ಮಲಗುವವನಾದ್ದರಿಂದ ಅರ್ಧ ಆಯುಷ್ಯವು ನಿಷ್ಪ್ರಯೋಜಕವೇ). ನಂತರ ಕೌಮಾರ ಅವಸ್ಥೆಗಳಲ್ಲಿ ಪ್ರಯೋಜನ ಜ್ಞಾನವಿಲ್ಲದೇ ಕ್ರೀಡಾಸಕ್ತನಾದ ಇವನ ೨೦ ವರ್ಷಗಳು ವ್ಯರ್ಥವಾಗುತ್ತವೆ. ಆ ಮೇಲೆ ಮುಪ್ಪಿನಿಂದ ಆವೃತವಾದ ದೇಹದಿಂದ ಅಸಮರ್ಥನಾದ ಇವನ ೨೦ ವರ್ಷಗಳು ವ್ಯರ್ಥವಾಗುತ್ತವೆ. ಪೂರೈಸಲು ಸಾಧ್ಯವಿಲ್ಲದ ವಿಷಯಾಭಿಲಾಷೆಯಿಂದ ಅತ್ಯಂತ ಬಲಿಷ್ಠವಾದ ಮೋಹದಿಂದ ಹೆಂಡತಿ, ಮಕ್ಕಳು, ಮನೆ ಮುಂತಾದ ವಿಷಯಗಳಲ್ಲಿ ಆಸಕ್ತನಾಗಿ ಮಹಾಪುರುಷಾರ್ಥ ಸಾಧನೆಯಿಂದ ದೂರನಾದ ಮನಸ್ಸುಳ್ಳ ಇವನ ಉಳಿದ ಕೆಲವು ವರ್ಷಗಳು ವ್ಯರ್ಥವೆನಿಸುತ್ತವೆ. ಈ ಕಾರಣದಿಂದ "ಕೌಮಾರ ಆಚರೇತ್ ಪ್ರಾಜ್ಞೋ ಧರ್ಮಾನ್ ಭಾಗವತಾನಿಹ" ಎಂಬಂತೆ ಕೌಮಾರಾವಸ್ಥೆಯಿಂದಲೇ ಶ್ರೀ ಹರಿಯಲ್ಲಿ ಭಕ್ತಿಮಾಡಿ ಭಾಗವತ ಧರ್ಮಗಳನ್ನು ಆಚರಿಸುತ್ತ ಶ್ರೇಯಸ್ಸಾಧನೆಯ ಮಾರ್ಗವನ್ನು ಹೊಂದಬೇಕು.

ದ್ರವ್ಯಂ ಕರ್ಮಚಕಾಲಶ್ಚ ಸ್ವಭಾವೋ ಜೀವಏವ ಚ ।
ಯದನುಗ್ರಹತಃ ಸಂತಿ ನ ಸಂತಿ ಯದು ಪೇಕ್ಷಯಾ ॥ (೨-೧೦-೧೨)

ಶ್ರೀಮದ್ಭಾಗವತ ವಾಕ್ಯದಂತೆ ಎಲ್ಲ ವಿಷಯಗಳು ಭಗವಂತನ ಅಧೀನವಾಗಿವೆಯಾದ್ದರಿಂದ ಆ ನರಸಿಂಹರೂಪಿ ಶ್ರೀ ಹರಿಯನ್ನು ನಿಷ್ಠೆಯಿಂದ ಭಕ್ತಿಯಿಂದ ಭಜಿಸಿದಲ್ಲಿ ಮೋಕ್ಷವು ದೊರಕುವದರಲ್ಲಿ ಸಂದೇಹವಿಲ್ಲ.

ಅಲ್ಪಸುಖಕಾಗಿ ನೀ ಅನೇಕ ಸುಖ ಮರೆವರೇ
ಕಲ್ಪ ಕಲ್ಪಕೆ ನಿರಯಃನುಣಸಬಹುದೋ ।
ಅಲ್ಪರುಪದೇಶದಲಿ ಭ್ರಾಂತನಾಗದೇ ಶೇಷ
ತಲ್ಪನ್ನ ಮೊರೆ ಹೋಗೋ ಮರೆಯದಲೇ ಮನವೇ ॥ ೨ ॥

ಅಲ್ಪವಾದ ವಿಷಯ ಸುಖಗಳನ್ನು ಬಯಸದೇ ಮೋಕ್ಷ ಸುಖವನ್ನು ಬಯಸುವವ ರಾಗಬೇಕು. ಅಲ್ಪವಾದ, ಕ್ಷಣಿಕವಾದ ವಿಷಯ ಸುಖಗಳು ನರಕಾದಿಗಳನ್ನು ತಂದು ಕೊಡುತ್ತವೆ. ಅಲ್ಪರಾದ ಜನರ ಉಪದೇಶವನ್ನು ಹೊಂದಿ ಭ್ರಾಂತನಾಗಕೂಡದು. ಮತ್ತು ಶೇಷಶಾಹಿಯಾದ ಶ್ರೀ ನಾರಾಯಣನನ್ನು ಮರೆಯದೇ ಮೊರೆ ಹೋಗ ಬೇಕೆಂದು ಇಲ್ಲಿ ದಾಸರು ತಿಳಿಸಿದ್ದಾರೆ.
ಮೊದಲನೆಯದಾಗಿ ಬ್ರಾಹ್ಮಣ ಜನ್ಮವು ಶ್ರೇಷ್ಠವಾದುದು. ಶ್ರೀಮದ್ಭಾಗವತದಲ್ಲಿ

ಬ್ರಾಹ್ಮಣಸ್ಯ ದೇಹೋಽಯಂ ಕ್ಷುದ್ರಕಾಮಾಯ ನೇಷ್ಯತೇ ।
ಕೃಛ್ರಾಯ ತಪಸೇಚೈವ ಪ್ರೇತ್ಯಾನಂತ ಸುಖಾಯಚ ॥ (೧೧-೧೭-೪೨)

ಬ್ರಾಹ್ಮಣ ಜನ್ಮವು ಕ್ಷುದ್ರ ಕಾಮನೆಗಳನ್ನು ಬಯಸಲು ಇರುವದಿಲ್ಲ. ಅನಂತ ಸುಖ (ಮೋಕ್ಷ) ವನ್ನು ಪಡೆಯುವದಕ್ಕಾಗಿ ಇದೆ. ಕಾರಣ ಅಲ್ಪವಾದ ಸ್ವರ್ಗಾದಿ ಸುಖಗಳನ್ನು ಮಾತ್ರ ಬಯಸಿ ಮೋಕ್ಷವನ್ನು ಮರೆಯಬಾರದಾಗಿ ತಿಳಿಸಿದ್ದಾರೆ.
ಶ್ರೀಮದಾಚಾರ್ಯರು ಅಣುಭಾಷ್ಯವೆಂಬ ಗ್ರಂಥದಲ್ಲಿ–

"ಶುಭೇನ ಕರ್ಮಣಾಸ್ವರ್ಗಂ ನಿರಯಂ ಚ ವಿಕರ್ಮಣಾ" ಎಂದಾಗಿ ಅಪ್ಪಣೆ ಕೊಡಿಸಿದ್ದಾರೆ–

ಶುಭಕರ್ಮಗಳನ್ನು ಮಾಡಿದ ಜೀವನು ಸ್ವರ್ಗಕ್ಕೆ ಹೋಗುತ್ತಾನೆ. ಸ್ವರ್ಗ ಸುಖವು ಅಲ್ಪಕಾಲಿಕವಾದದ್ದು. "ತತಃ ಶೇಷೇಣ ಇಮಂ ಲೋಕಂ ಯಾತಿ" ಎಂಬ ಶ್ರುತಿವಾಕ್ಯದಂತೆ ಸ್ವರ್ಗಾದಿಗಳಲ್ಲಿ ಜೀವರು ಕರ್ಮಫಲಭೋಗವನ್ನು ಮಾಡಿದ ಮೇಲೆ ಕರ್ಮಶೇಷಯುಕ್ತರಾಗಿ ಭೂಲೋಕಕ್ಕೆ ಬರುತ್ತಾರೆ. ಇಂಥ ಅಲ್ಪ ಸುಖ ಸುಖಕ್ಕಾಗಿ ಜೀವರು ಹಾತೊರೆಯಬಾರದು ಕಾಮ್ಯವಾದ ಶುಭಕರ್ಮಗಳಲ್ಲಿ ವೈರಾಗ್ಯ ತಾಳುವದರಿಂದ ಅಂದರೆ ನಿಷ್ಕಾಮ ಕರ್ಮಗಳನ್ನು ಮಾಡುವದರಿಂದ ಜ್ಞಾನವನ್ನು ಹೊಂದಿ (ಕರ್ಮಣಾ ಜ್ಞಾನ ಮಾತನೋತಿ) ಎಂಬಂತೆ ಅನಂತ ಸುಖ ಮೋಕ್ಷವನ್ನು ಹೊಂದುತ್ತಾನೆ. (ಜ್ಞಾನೇನೈವ ಪರಂ ಪದಂ ಎಂದಾಗಿ ತಿಳಿಸಿರುವರು).

ಸ್ವೋಚಿತ ಕರ್ಮಗಳನ್ನು ಆಚರಿಸದೇ ವಿರುದ್ಧ ಕರ್ಮಗಳನ್ನು ಆಚರಿಸುವದ ರಿಂದ ನಿರಯ (ನರಕ) ವನ್ನು ಮನುಷ್ಯನು ಹೊಂದುತ್ತಾನೆ.

ಅಯಾನ್ನಿರ್ಗತೋ ಹಿ ನಿರಯಃ ಅಥವಾ ನೀಚೈರಯನಂ ವಾ ನಿರಯಃ ಎಂಬಂತೆ ನಿರಯವೆಂದರೆ ಅಧೋಗತಿ ಅಥವಾ ನರಕವೆಂದು ಅರ್ಥ.

"ಓಂ ಸಂಯಮನೇ ತ್ವನುಭೂಯೇ ತರೇಷಾಮಾರೋಹಾವರೋಹೌ ತ
ದ್ಗತಿದರ್ಶನಾತ್ ಓಂ ಎಂಬ ಸೂತ್ರದಲ್ಲಿ ಸೂತ್ರಕಾರರು ಜೀವನು ತನ್ನ ಅಶುಭ
ಕರ್ಮಗಳಿಂದ ನಿತ್ಯ ನರಕವನ್ನು ಹೊಂದುವನು ಎಂಬುದಾಗಿ ತಿಳಿಸಿರುವರು.

"ಸರ್ವೇವಾ ಏತೇ ಽಶುಭಕೃತಃ ಸಂಯಮನೇ ಪ್ರಪತಂತಿ ಎಂಬ ಕೌಂಡರವ
ಶ್ರುತಿ ಇದನ್ನೇ ತಿಳಿಸುವದು.

ನಂತರ ಅಲ್ಪರಾದವರ ಉಪದೇಶವನ್ನು ಹೊಂದಿ ಭ್ರಾಂತರಾಗಕೂಡದು.
ಎಂದು ತಿಳಿಸುತ್ತಾರೆ.

ಚಾರ್ವಾಕರೇ, ಮುಂತಾದ ಇತರ ಮತೀಯರ ಉಪದೇಶವನ್ನು ಹೊಂದಿದಲ್ಲಿ
ಮನುಷ್ಯನು ಭ್ರಾಂತನಾಗುವದರಲ್ಲಿ ಸಂದೇಹವಿಲ್ಲ. ಕಾರಣವೆಂದರೆ ಚಾರ್ವಾಕರು
ಹೇಳುತ್ತಾರೆ.

ನ ಸ್ವರ್ಗೋ ನಾಪವರ್ಗೋವಾ ನೈವಾತ್ಮಾ ಪಾರಲೌಕಿಕಃ ।
ನೈವ ವರ್ಣಾಶ್ರಮಾದೀನಾಂ ಕ್ರಿಯಾಶ್ಚ ಫಲದಾಯಿಕಾಃ ।
ಯಾವಜ್ಜೀವಂ ಸುಖಂ ಜೀವೇನ್ನಾಸ್ತಿ ಮೃತ್ಯೋರ ಗೋಚರಃ ।
ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ।
ದೇಹಸ್ಯ ನಾಶೋ ಮುಕ್ತಿಸ್ತು ನ ಜ್ಞಾನಾನ್ಮುಕ್ತಿರಿಷ್ಯತೇ ।
ಯಾವಜ್ಜೀವೇತ್ ಸುಖಂ ಜೀವೇತ್ ಋಣಂಕೃತ್ವಾ ಘೃತಂಪಿಬೇತ್ ॥

ಸ್ವರ್ಗ ಮೋಕ್ಷ, ಪರಲೋಕ, ಆತ್ಮ ಯಾವವೂ ಇಲ್ಲ. ವರ್ಣಾಶ್ರಮಗಳಿಗೆ
ವಿಹಿತವಾದ ಕರ್ಮಗಳು ಯಾವ ಫಲವನ್ನು ಕೊಡುವದಿಲ್ಲ. ಜೀವಿಸಿರುವವರೆಗೆ
ಸುಖದಿಂದ ಇರಬೇಕು. ಮರಣಕ್ಕೊಳಗಾಗದ ಮನುಷ್ಯರು ಯಾರೂ ಇಲ್ಲ.
ಶರೀರವು ಒಂದು ಬಾರಿ ಬೂದಿಯಾದ ಮೇಲೆ ಮತ್ತೆ ಹಿಂದಿರುಗಿ ಬರುವದು
ಹೇಗೆ ? ದೇಹ ನಾಶವೇ ಮೋಕ್ಷವು. ಜ್ಞಾನದಿಂದ ಮೋಕ್ಷವು ದೊರಕುವದಿಲ್ಲ.
ಬದುಕಿರುವವರೆಗೆ ಸುಖದಿಂದ ಬಾಳಬೇಕು. ಸಾಲ ಮಾಡಿಯಾದರೂ ತುಪ್ಪ
ಕುಡಿಯಬೇಕು.

ಈ ರೀತಿಯಾಗಿ ಹೇಳುವವರ ಉಪದೇಶವನ್ನು ಕೇಳಿ ತಪ್ಪು ಮಾರ್ಗವನ್ನು
ಹೊಂದದೇ ಶೇಷತಲ್ಪನಾದ (ಶೇಷಶಾಯಿಯಾದ) ಪರಮಾತ್ಮನ ಆಜ್ಞೆಯನ್ನು
ಶಿರಸಾವಹಿಸಿ ಅದರಂತೆ ನಡೆದರೆ ಮೋಕ್ಷವು ನಿಶ್ಚಯವಾಗಿ ದೊರಕುತ್ತದೆ.

ಪರಮಾತ್ಮನು ಶೇಷಶಾಯಿಯಾಗಿದ್ದಾನೆಂಬುದು ಕೆಳಗಿನ ವಾಕ್ಯದಿಂದ ತಿಳಿದು
ಬರುತ್ತದೆ.

ಶೇಷಸ್ತಯೋರೇವಹಿ ಜೀವನಾಮಾ ಕಾಲಾತ್ಮಕಃ ಸೋಽಥಸುಪರ್ಣ ಆಸೀತ್ ।
ತೌ ವಾಹನಂ ಶಯನಂ ಚೈವ ವಿಷ್ಣೋಃ ಕಾಲಾಜಯಾದ್ಯಾಶ್ಚ ತತಃ ಪ್ರಸೂತಾಃ॥
(ಶ್ರೀ ಮ. ಭಾ. ತಾ. ನಿ. ೩–೧೩)

ಶೇಷನಿಗೆ 'ಜೀವ' ಎಂದು ಹೆಸರಿದೆ. ಗರುಡನಿಗೆ 'ಕಾಲ' ಎಂಬ ಹೆಸರಿದೆ. ಗರುಡನು ವಿಷ್ಣುವಿನ ವಾಹನನಾದ ಶೇಷನು ವಿಷ್ಣುವಿನ ಹಾಸಿಗೆಯಾದ.

ನಿನ್ನಿಂದ ಭವಬಂಧನ ನಿನ್ನಿಂದ ಮೋಚನ
ನಿನ್ನಿಂದ ಪ್ರಸನ್ನವೆಂಕಟೇಶ ನೊಲುವ
ಎನ್ನ ದಣಿಸದರಿಂದು ಇದರಿಂದ ತಪ್ಪಿದರೆ
ಘನ್ನ ಗುರು ಮಧ್ವೇಶನಾಣೆ ನಿನಗಿಹುದೋ ॥ ೩ ॥

ಈ ಪದ್ಯದಲ್ಲಿ ದಾಸರು ಮನಸ್ಸೇ ಈ ಸಂಸಾರ ಬಂಧನಕ್ಕೆ ಹಾಗೂ ಬಿಡುಗಡೆಗೆ ಕಾರಣವಾಗಿದೆ ಮತ್ತು ಮನಸ್ಸೇ ಭಗವಂತನ ಒಲುಮೆಯನ್ನು ಸಂಪಾದಿಸಲು ಕಾರಣವೆಂಬುದಾಗಿ ತಿಳಿಸುತ್ತಾರೆ.

ಶ್ರೀ ವಿಷ್ಣು ರಹಸ್ಯವೆಂಬ ಗ್ರಂಥದಲ್ಲಿ ಈ ವಿಷಯುವನ್ನು ಹೀಗೆ ನಿರೂಪಿಸಿದ್ದಾರೆ.

ಮನ ಏವಹಿ ಸರ್ವೇಷಾಂ ಬಂಧನಂ ಮೋಕ್ಷಕಂ ತಥಾ ।
ವಿಷಯಾಸಂಗಿ ಬಂಧಾಯ ತದ್ವಿರಕ್ತಂ ವಿಮುಕ್ತಯೇ ॥ (೨೦-೧೭)

ಶ್ರೀಮದ್‌ಭಾಗವತದಲ್ಲಿ ಇದನ್ನು ಹೀಗೆ ತಿಳಿಸಿದ್ದಾರೆ.

ಚೇತಃ ಖಲ್ವಸ್ಯ ಬಂಧಾಯ ಮುಕ್ತಯೇ ಚಾತ್ಮನೋ ಮತವ್ ॥
(೩-೨೫-೧೫)

ಮೈತ್ರಾಯಣಿ ಉಪನಿಷತ್ತಿನಲ್ಲಿ-

ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ । ಎಂಬುದಾಗಿ ತಿಳಿಸಲಾಗಿದೆ.

ಮನಸ್ಸು ವಿಷಯಗಳಲ್ಲಿ ಹರಿದಾಡುತ್ತಿದ್ದರೆ ಅದು ಸಂಸಾರ ಬಂಧನಕ್ಕೆ ಕಾರಣವಾಗುತ್ತದೆ. ಅದೇ ಮನಸ್ಸು ವಿಷಯವಿಮುಖವಾಗಿ ಪರಮಾತ್ಮನಲ್ಲಿ ಸ್ಥಿರವಾಗಿರುವದಾದರೆ ಸಂಸಾರದಿಂದ ನಿವೃತ್ತಿಯನ್ನು ತಂದುಕೊಟ್ಟು ಮೋಕ್ಷಕ್ಕೆ ಕಾರಣೀಭೂತವಾಗುತ್ತದೆ.

ಶ್ರೀಕೃಷ್ಣನು ಶ್ರೀಭಗವದ್ಗೀತೆಯಲ್ಲಿ ಹೇಳಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।
ಶ್ರದ್ಧಯಾ ಪರಯೋ ಪೇತಾಸ್ತೇಮೇ ಯುಕ್ತತಮಾ ಮತಾಃ ॥ (೧೨-೨)

ಯಾರು ಪರಮಾತ್ಮನಲ್ಲಿ ಮನಸ್ಸಿಟ್ಟು ನಿರಂತರ ಧ್ಯಾನಯೋಗದಿಂದ ಉತ್ತಮವಾದ ಆಸ್ತಿಕ್ಯ ಬುದ್ಧಿಯಿಂದ ಶ್ರದ್ಧೆಯಿಂದ ಕೂಡಿದವರಾಗಿ ಪರಮಾತ್ಮನನ್ನು ಉಪಾಸಿಸುತ್ತಾರೋ ಅವರೇ ಮೋಕ್ಷೋಪಾಯುವನ್ನು ತಿಳಿದವರು ಮತ್ತು ಪರಮಾತ್ಮನಿಗೆ ಸಮ್ಮತರಾದವರು.

ಹೀಗೆ ಮನಸ್ಸು ಪರಮಾತ್ಮನನ್ನು ಧ್ಯಾನಿಸಿ ಕೊನೆಗೆ ಮೋಕ್ಷವನ್ನು ತಂದು ಕೊಡುವಲ್ಲಿ ಪ್ರಮುಖ ಪಾತ್ರವಹಿಸಿದೆ. ಈ ರೀತಿ ಮಾಡಬೇಕಾದುದು ಮನಸ್ಸಿನ ಕರ್ತವ್ಯವೂ ಆಗಿರುತ್ತದೆ. ಕರ್ತವ್ಯದಲ್ಲಿ ಚ್ಯುತಿ ಹೊಂದಿದರೆ ನಿನಗೆ ಗುರುಮಧ್ವೇಶನ ಆಣೆ ಇದೆ ಎನ್ನುತ್ತಾರೆ ದಾಸರು. ಅಂದರೆ ಯಾವದೇ ಪ್ರಸಂಗದಲ್ಲಿಯೂ ಮನಸ್ಸು ಪರಮಾತ್ಮನಿಗೆ ವಿಮುಖವಾಗಿ ವರ್ತಿಸಕೂಡದು ಎಂಬ ಕಳಕಳಿಯ ಧ್ವನಿ ಇಲ್ಲಿದೆ.

ಪವನತನಯರಾದ ಶ್ರೀ ಗುರುಮಧ್ವರು ಪರಮಾತ್ಮನಿಗೆ ಅತ್ಯಂತ ಪ್ರೀತಿ ಪಾತ್ರರು.

ದೇಹೇಽಪಿ ಯತ್ರ ಪವನೋಽತ್ರ ಹರಿರ್ಗತೋಽಸೌ ।
ತತ್ರೈವ ವಾಯುರಿತಿ ವೇದ ವಚಃ ಪ್ರಸಿದ್ಧಂ ॥
(ಶ್ರೀ ಮ. ಭಾ. ತಾ. ನಿರ್ಣಯ)

ಎಂಬಂತೆ ಶ್ರೀ ವಾಯುದೇವರ ಅಂತರ್ಯಾಮಿಯಾಗಿ ಶ್ರೀ ಹರಿಯು ಸರ್ವದಾ ನೆಲೆಸಿರುತ್ತಾನೆ.

ವಾಯುದೇವರ ಮೂರನೇ ಅವತಾರವು ಮಧ್ವಾವತಾರವು. ಇದನ್ನು 'ಮಧ್ವೋಯತ್ತುತ್ರತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ" ಎಂಬುದಾಗಿ ಶ್ರೀಮಧ್ವರೇ ತಿಳಿಸಿದ್ದಾರೆ.

ಕಾರಣ ಶ್ರೀ ದಾಸರು ಈ ಗುರುಮಧ್ವರಿಗೇ ಈಶನಾದ ಸ್ವಾಮಿಯಾದ ಶ್ರೀಹರಿಯು ಆಣೆ ಎಂದಿರುತ್ತಾರೆ.

ಒಟ್ಟಿನಲ್ಲಿ ಶ್ರೀ ಪ್ರಸನ್ನವೆಂಕಟ ದಾಸರು ಮನಸ್ಸಿನ ಬಗ್ಗೆ ಪ್ರತಿಯೊಬ್ಬರೂ ಎಚ್ಚರಿಕೆ ವಹಿಸಿ ವಿಷಯ ಪದಾರ್ಥಗಳಲ್ಲಿ ವೈರಾಗ್ಯವನ್ನು ಹೊಂದಿ, ಮನಸ್ಸನ್ನು ಪರಮಾತ್ಮನಲ್ಲಿ ಕೇಂದ್ರೀಕರಿಸಿ ಅವನ ಅನುಗ್ರಹಕ್ಕೆ ಪಾತ್ರರಾಗಬೇಕೆಂಬುದಾಗಿ ಅಪ್ಪಣೆ ಕೊಡಿಸಿದ್ದಾರೆ.

**ಶ್ರೀ ಮಧ್ವೇಶಾರ್ಪಣಮಸ್ತು**

9)

|| ಶ್ರೀಃ ||

## ಸಂಗವಾಗಲಿ ಸಾಧು ಸಂಗವಾಗಲಿ

ಶ್ರೀ ಪ್ರಸನ್ನ ವೆಂಕಟದಾಸರು

ಸಂಗವಾಗಲಿ ಸಾಧು ಸಂಗವಾಗಲಿ ।
ಸಂಗದಿಂದ ಲಿಂಗದೇಹ ಭಂಗವಾಗಲಿ ॥ ಪ ॥

ಅಚ್ಯುತಾಂಘ್ರಿ ನಿಷ್ಠರ ಯದೃಚ್ಛಾಲಾಭ ತುಷ್ಟರ ॥
ನಿಶ್ಚಯ ಜ್ಞಾನವಂತರ ಅಚ್ಚ ಭಾಗವತರ ನಿತ್ಯ ॥ ೧ ॥

ತಂತ್ರಸಾರ ಅಷ್ಟ ಮಹಾಮಂತ್ರ ಪರಿಪೂರ್ಣ ಸ್ನೇಹ ।
ಯಂತ್ರದಿಂದ ಮಾಡಿ ಜಗತ್ ಸ್ವಾತಂತ್ರ್ಯನ ಗುರಿ ಮಾಡುವವರ ॥ ೨ ॥

ಪಂಚ ಸಂಸ್ಕಾರ ಭೇದ ಪಂಚಯುಕ್ತರಾಗಿ ಪ್ರ ॥
ಪಂಚಸೂತ್ರ. ಪ್ರಸನ್ನವೆಂಕಟ ಪಂಚಬಾಣನಯ್ಯನವರ ॥ ೩ ॥

ಶ್ರೀ ಮಧ್ವೇಶಾರ್ಪಣಮಸ್ತು

ಪ್ರಸ್ತುತ ಪದ್ಯದಲ್ಲಿ ಶ್ರೀ ಪ್ರಸನ್ನವೆಂಕಟದಾಸರು ಸಾಧು ಸಜ್ಜನರ ಸಹವಾಸವು ನಿರಂತರ ಆಗುತ್ತಿರಬೇಕು. ಇಂಥ ಸಾಧುಸಂಗದಿಂದ ಲಿಂಗದೇಹವು ಭಂಗವಾಗುವದು. ಅಂದರೆ ಮೋಕ್ಷವು ದೊರಕುವದು ನಿಶ್ಚಿತವೆಂದು ತಿಳಿಸಿದ್ದಾರೆ.

ಸಂಗವಾಗಲಿ ಸಾಧು ಸಂಗವಾಗಲಿ ।
ಸಂಗದಿಂದ ಲಿಂಗದೇಹ ಭಂಗವಾಗಲಿ ॥ ಪ ॥

ಮೊದಲನೆಯದಾಗಿ "ಸಂಗ" ವೆಂದರೇನು ? ನೋಡುವಾ.

ಷಂಜ-ಸಂಗೇ ಘಂಯಿಕ್ ಎಂಬ ಧಾತುವಿನಿಂದ ಉತ್ಪನ್ನವಾದ ಈ ಪದಕ್ಕೆ ಸಂಬಂಧ, ಸಹವಾಸ ಎಂದು ಅರ್ಥವಾಗುತ್ತದೆ.

ಸಾಧುಸಂಗವಾಗಲಿ– ಎಂದರೆ ಸಾಧುಜನರ ಸಹವಾಸವು ಉಂಟಾಗಲಿ– ಎಂದು ಅಭಿಪ್ರಾಯವು.

ಈಗ ಸಾಧುಗಳೆಂದರೆ ಯಾರು ಎಂಬುದನ್ನು ವಿಚಾರಿಸೋಣ.

ನಿರ್ವೈರಃ ಸದಯಃ ಶಾಂತಃ ದಂಭಾಹಂಕಾರವರ್ಜಿತಃ ।
ನಿರಪೇಕ್ಷೋ ಮುನಿರ್ವೀತರಾಗಃ ಸಾಧುರಿಹೋಚ್ಯತೇ ॥

ವೈರರಹಿತನಾಗಿ, ದಯೆಯಿಂದ ಕೂಡಿದವನಾಗಿ, ಶಾಂತಸ್ವಭಾವದಿಂದ ಕೂಡಿದ ದಂಭ, ಅಹಂಕಾರಗಳನ್ನು ಬಿಟ್ಟ, ಅಪೇಕ್ಷೆ, ರಹಿತನಾದ, ವಿಷಯಾಸಕ್ತಿರಹಿತನಾದ ವನು ಯಾವನೋ ಅವನು "ಸಾಧು" ಎಂಬುದಾಗಿ ಕರೆಯಿಸಿಕೊಳ್ಳುತ್ತಾನೆ.

ಹಾಗೂ ಧರ್ಮಾಧರ್ಮ ವಿವೇಕೇನ ವೇದಮಾರ್ಗಾನುಸಾರಿಣಃ ।
ಸರ್ವಲೋಕ ಹಿತಾಸಕ್ತಾಃ ಸಾಧವಃ ಪರಿಕೀರ್ತಿತಾ ॥

ಧರ್ಮವು ಯಾವುದು ? ಅಧರ್ಮ ಯಾವುದು ಎಂಬುದನ್ನು ಚೆನ್ನಾಗಿ ಅರಿತು ಕೊಂಡು ವೇದೋಕ್ತ ಧರ್ಮಮಾರ್ಗವನ್ನು ಅನುಸರಿಸುವವರು, ಎಲ್ಲ ಸಜ್ಜನರಿಗೂ ಹಿತವನ್ನು ಉಂಟು ಮಾಡುವದರಲ್ಲಿ ಆಸಕ್ತರಾದವರು "ಸಾಧು" ಗಳೆಂದು ಕರೆಸಿ ಕೊಳ್ಳುತ್ತಾರೆ.

ಇನ್ನು ಸಾಧುಗಳ ಲಕ್ಷಣವೇನು ? ತಿಳಿಯೋಣ.

ನ ಪ್ರಹೃಷ್ಯತಿ ಸಮ್ಮಾನೇ ನಾವಮಾನೇನ ಕುಪ್ಯತಿ ।
ನಕ್ರುದ್ಧಃ ಪರುಷಂ ಬ್ರೂಯಾತ್ ಸಾಧೋಃಸ್ತು ಲಕ್ಷಣಂ ॥

ತನ್ನನ್ನು ಗೌರವಿಸಿದಾಗ ಸಂತೋಷದಿಂದ ಹಿಗ್ಗದಿರುವದು. ಅವಮಾನಿಸಿದಾಗ ಕುಗ್ಗದೇ ಇರುವದು ಸಿಟ್ಟುಮಾಡದಿರುವದು, ಸಿಟ್ಟಿನಿಂದ ಕಠಿಣಮಾತುಗಳನ್ನು ಆಡದಿರುವದು ಇವೆಲ್ಲ ಸಾಧುಗಳ ಲಕ್ಷಣಗಳಾಗಿವೆ.

ಇಂಥ ಸಾಧು ಜನರ ಸಂಗವು ಅತಿ ಅವಶ್ಯವಾಗಿದೆ. ಕಾರಣವೆಂದರೆ ಸುಭಾಷಿತ ವೊಂದು ಹೀಗೆ ಹೇಳುತ್ತದೆ.

ಸಾಧೂನಾಂ ದರ್ಶನಂ ಪುಣ್ಯಂ ತೀರ್ಥ ಭೂತಾಹಿ ಸಾಧವಃ ।
ಕಾಲೇನ ಫಲತೇ ತೀರ್ಥಂ ಸದ್ಯಃ ಸಾಧು ಸಮಾಗಮಃ ॥

ಸಾಧುಗಳ ದರ್ಶನವು ಪುಣ್ಯಪ್ರದವು. ಸಾಧುಗಳು ತೀರ್ಥ ಸಮಾನರೇ ಆಗಿರುತ್ತಾರೆ. ತೀರ್ಥವು ಕೆಲವು ಕಾಲದ ನಂತರ ಫಲಕೊಡುವುದಾದರೆ ಸಾಧುಗಳ ಸಮಾಗಮವು, ಸಂಗವು ಕೂಡಲೇ ಫಲಿಸುತ್ತದೆ.

ಇದನ್ನೇ ಶ್ರೀಮದ್‌ಭಾಗವತಕಾರರು ಹೀಗೆ ತಿಳಿಸಿದ್ದಾರೆ.

ನಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।
ತೇ ಪುನಂತ್ಯುರು ಕಾಲೇನ ದರ್ಶನಾದೇವ ಸಾಧವಃ ॥ (೧೦–೮೪–೧೧)

ಭಗವಂತನೇ ಹೇಳಿದ ಮಾತೊಂದನ್ನು ಪರಿಶೀಲಿಸಿದರೆ ಸಾಧುಗಳ ಮಹಿಮೆ ಎಷ್ಟೆಂದು ವಿದಿತವಾಗುತ್ತದೆ.

ಅಹಂ ಭಕ್ತಪರಾಧೀನೋ ಹ್ಯಸ್ವತಂತ್ರ ಇವದ್ವಿಜ ।
ಸಾಧುಭಿರ್ಗ್ರಸ್ತ ಹೃದಯೋ ಭಕ್ತೈರ್ಭಕ್ತ ಜನಪ್ರಿಯಃ ॥
(ಶ್ರೀ ಭಾಗವತ ೯–೬–೫೧)

ನಾನು ಭಕ್ತರ ಅಧೀನನಾಗಿರುತ್ತೇನೆ. ಅಸ್ವತಂತ್ರನಂತೆ ಇರುತ್ತೇನೆ. ಸಾಧುಗಳಿಂದ ನನ್ನ ಮನಸ್ಸು ವಶೀಕೃತವಾಗಿದೆ. ನಾನು ಭಕ್ತಜನರಿಗೆ ಪ್ರಿಯನಾಗಿರುತ್ತೇನೆ.

ಇಂಥ ಸಾಧುಗಳಲ್ಲಿ ಪರಮಾತ್ಮನು ನೆಲೆಸಿರುತ್ತಾನೆ.

ಸಾಧವೋ ನ್ಯಾಸಿನಃ ಶಾಂತಾಬ್ರಹ್ಮಿಷ್ಠಾ ಲೋಕ ಪಾವನಾಃ ॥
ಹರಂತ್ಯಘಂ ತೇಽಂಗ ಸಂಗಾತ್ ತೇಷ್ವಾಸ್ತೇ ಹ್ಯಘಭಿದ್ಧರಿಃ ॥
(ಶ್ರೀ ಭಾಗವತ ೯–೭–೬)

ಲೋಕವನ್ನು ಪವಿತ್ರೀಕರಿಸುವ ಬ್ರಹ್ಮಜ್ಞಾನಿಗಳು, ಸನ್ಯಾಸಿಗಳು, ಸಾಧುಗಳು ತಮ್ಮ ಅಂಗ ಸಂಪರ್ಕದಿಂದ ಗಂಗೆಯಲ್ಲಿಯ ಪಾಪವನ್ನು ಪರಿಹರಿಸುತ್ತಾರೆ. ಪಾಪ ಪರಿಹಾರಕನಾದ ಶ್ರೀ ಹರಿಯು ಅಂತಹ ಸಾಧುಗಳಲ್ಲಿ ನೆಲೆಸಿರುತ್ತಾನೆ.

ಸಂಗಮಃ ಖಲು ಸಾಧೂನಾಮ್ ಉಭಯೋಷಾಂ ಚ ಸಮ್ಮತಃ ।
ಯತ್ ಸಂಭಾಷಣ ಸಂಪ್ರಶ್ನಃ ಸರ್ವೇಷಾಂ ವಿತನೋತಿ ಶಮ್ ॥
(ಶ್ರೀ ಭಾಗವತ ೪–೨೨–೧೯)

ಸಾಧುಗಳ ಸಂಗವು, ಸಂಭಾಷಣೆಯು, ಪರಿಪ್ರಶ್ನೆಯು ಉಭಯ ಸಜ್ಜನರಿಗೂ ಸುಖ ವನ್ನು ತಂದುಕೊಡುತ್ತದೆ.

ಶ್ರೀ ಪ್ರಹ್ಲಾದರಾಜರು "ಹಿತ್ವಾಽತ್ಮ ಪಾತಂ ಗೃಹಮಂಧಕೂಪಂ ವನಂಗತೋ ಯದ್ ಹರಿಮಾಶ್ರಯೇತ್" ಎಂಬುದಾಗಿ ಹೇಳಿದ್ದಾರೆ.

ಇಲ್ಲಿ ವನ ಎಂದರೆ ಸಜ್ಜನರ ಸಂಗವೆಂದೂ ಗೃಹವೆಂದರೆ ದುಷ್ಟಜನಸಂಗ ವೆಂದೂ ತಿಳಿಸಿ ಸಜ್ಜನ ಸಂಗವನ್ನು ಮಾಡಿ ಪರಮಾತ್ಮನನ್ನು ಹೊಂದಬೇಕೆಂಬುದಾಗಿ ತಿಳಿಸಿರುವದನ್ನೂ ಗಮನಿಸಬೇಕು.

ಶ್ರೀ ನಾರದ ಮಹಾಪುರಾಣದಲ್ಲಿ ಸಾಧು ಸಜ್ಜನರ ಸಂಗದ ಬಗ್ಗೆ ಹೀಗೆ ತಿಳಿಸಿದ್ದಾರೆ.

ದುರ್ಲಭಾಃ ಪುರುಷಾ ಲೋಕೇ ಭಗವದ್ಭಕ್ತಿ ಲಾಲಸಾ ।
ತೇಷಾಂ ಸಂಗೋ ಭವೇದ್ಯಸ್ಯ ತಸ್ಯ ಶಾಂತಿರ್ಹಿ ಶಾಶ್ವತೀ ॥

ಈ ಲೋಕದಲ್ಲಿ ಭಗವಂತನಲ್ಲಿ ನಿರತಿಶಯವಾದ ಭಕ್ತಿಯನ್ನು ಮಾಡಿ ಅದರಲ್ಲಿಯೇ ಆನಂದ ಪಡುತ್ತಿರುವ ಸಜ್ಜನರು ಪರಮ ದುರ್ಲಭವೇ ಸರಿ. ಅಂಥ ಸತ್ಪುರುಷರ ಸಾಧುಗಳ ಸಂಗವಾದರೆ ಮಾನವನಿಗೆ ಶಾಶ್ವತವಾದ ಶಾಂತಿಯು ದೊರಕುತ್ತದೆ.

ಶ್ರೀ ಪದ್ಮ ಮಹಾಪುರಾಣದಲ್ಲಿ ಹೀಗೆ ವರ್ಣಿಸಿದ್ದಾರೆ.

ಸಂಸಾರೇಽಸ್ಮಿನ್ ಕ್ಷಣಾರ್ಧೋಽಪಿ ಸತ್ಸಂಗಃ ಶೇವಧಿರ್ನೃಣಾಂ ।
ಯಸ್ಮಾದವಾಪ್ಯತೇ ಸರ್ವಂ ಪುರುಷಾರ್ಥಚತುಷ್ಟಯಂ ॥

ಈ ಸಂಸಾರದಲ್ಲಿ ಅರೆಕ್ಷಣವಾದರೂ ಸಾಧುಗಳ ಸಂಗ ದೊರಕಿದರೆ ಅದುವೆ ಒಂದು ದೊಡ್ಡ ನಿಧಿಯಂತೆ. ಏಕೆಂದರೆ ಅದರಿಂದ ಎಲ್ಲ ನಾಲ್ಕು ಪುರುಷಾರ್ಥಗಳು ಲಭಿಸುತ್ತವೆ.

ಶ್ರೀಮನ್ಮಹಾಭಾರತದಲ್ಲಿ ಹೀಗೆ ಹೇಳುತ್ತಾರೆ.

ಮೋಹಜಾಲಸ್ಯ ಯೋನಿರ್ಹಿ ಮೂಢೈರೇವ ಸಮಾಗಮಃ ।
ಅಹನ್ಯಹನಿ ಧರ್ಮಸ್ಯ ಯೋನಿಃ ಸಾಧು ಸಮಾಗಮಃ ।
ಸದ್ಭಿಶ್ಚ ಸಹ ಸಂಸರ್ಗಃ ಕಾರ್ಯಂ ಶಮಪರಾಯಣೈಃ ॥ (ವನಪರ್ವ)

ಶ್ರೀಮದ್ಭಾಗವತದಲ್ಲಿ ಸತ್‌ಸಹವಾಸದಿಂದಾಗುವ ಲಾಭವನ್ನು ಹೀಗೆ ತಿಳಿಸಿದ್ದಾರೆ.

ಸತಾಂ ಪ್ರಸಂಗಾನ್ಮಮ ವೀರ್ಯಸಂಪದೋ
ಭವಂತಿ ಹೃತ್ಕರ್ಣ ರಸಾಯನಾಃ ಕಥಾಃ ।
ತಜ್ಜೋಷಣಾದಾಶ್ವಪವರ್ಗವರ್ತ್ಮನಿ
ಶ್ರದ್ಧಾ ರತಿಃ ಭಕ್ತಿರನುಕ್ರಮಿಷ್ಯತಿ ॥ (೩-೨೬-೨೫)

ಸಜ್ಜನ ಸಹವಾಸದಿಂದ ಕಿವಿ ಮನಗಳಿಗೆ ಅಮೃತದಂತೆ ಆನಂದವನ್ನುಂಟು ಮಾಡುವ ಶ್ರೀ ಹರಿಯ ಮಹಿಮೆಗಳೆಂಬ ಸಂಪದ್ಯುಕ್ತ ಚರಿತ್ರೆಗಳ ಲಾಭವಾಗುತ್ತದೆ. ನಂತರ ಭಗವದಪರೋಕ್ಷಕ್ಕೆ ಮಹಾತ್ಮರ ಸೇವೆಯ ಪ್ರಭಾವದಿಂದ ಸಾಕ್ಷಾತ್ ಸಾಧಕವಾದ ಭಕ್ತಿಯು ಕ್ರಮೇಣವಾಗಿ ಅಭಿವೃದ್ಧಿಹೊಂದುತ್ತದೆ.

ಲಭತೇ ಮಯಿ ಸದ್‌ಭಕ್ತಿಂ ಮತ್‌ಸ್ಮೃತಿಃ ಸಾಧುಸೇವಯಾ (೧೧-೧೧-೪೭) ಎಂಬಂತೆ ಈ ಭಕ್ತಿಯು ಲಿಂಗದೇಹ ಭಂಗಕ್ಕೆ ಕಾರಣವಾಗಿ ಮೋಕ್ಷವನ್ನು ದೊರಕಿಸಿ ಕೊಡುತ್ತದೆ.

ಈ ಕಾರಣಗಳಿಂದ– "ದೇಹಿ ಸದಾ ಸಜ್ಜನಾನಾಂ ಚ ಸಂಗಂ ।
ದಗ್ಧಂ ಕುರು ದುರ್ಜನಾನಾಂ ಚ ಸಂಗಂ ॥ ಎಂಬ

ಶ್ರೀ ಗರುಡಪುರಾಣದ ವಾಕ್ಯದಂತೆ ನಾವು ಯಾವಾಗಲೂ "ಸಾಧು ಸಂಗವಾಗಲಿ" ಎಂಬುದಾಗಿ ಅಪೇಕ್ಷಿಸುತ್ತಿರಬೇಕಾದುದು ಅವಶ್ಯವೆಂದು ಶ್ರೀದಾಸರು ಹೇಳಿದ್ದಾರೆ.

ಅಚ್ಯುತಾಂಘ್ರಿನಿಷ್ಠರ ಯದೃಚ್ಛಾಲಾಭ ತುಷ್ಟರ ।
ನಿಶ್ಚಯ ಜ್ಞಾನವಂತರ ಅಚ್ಚಭಾಗವತರ ನಿತ್ಯ ॥ ೧ ॥

ಇಲ್ಲಿ ೧. ಪರಮಾತ್ಮನ ಪಾದಾರವಿಂದಗಳಲ್ಲಿಯೇ ಮನಸ್ಸಿಟ್ಟವರ

೨. ಭಗವಂತನಿಂದ ಕೊಡಲ್ಪಟ್ಟ ಅನ್ನಾದಿ ವಿಷಯಗಳಲ್ಲಿ ತೃಪ್ತಿಯಿಂದ ಇರುವವರ

೩. ತಾರತಮ್ಯೋಪೇತವಾಗಿ ಭಗವಂತನೇ ಸರ್ವೋತ್ತಮ ಎಂಬ ನಿಶ್ಚಿತ ಜ್ಞಾನವುಳ್ಳವರ

೪ ಭಾಗವತ ಧರ್ಮಗಳನ್ನೇ ನಿತ್ಯದಲ್ಲಿ ಆಚರಿಸುವವರ ಸಂಗವಾಗಲಿ ಎಂಬುದಾಗಿ ತಿಳಿಸಿದ್ದಾರೆ.

ಮೊದಲು "ಅಚ್ಯುತಾಂಘ್ರಿ ನಿಷ್ಠರ" ಎಂಬ ಪದದ ಔಚಿತ್ಯವನ್ನು ನೋಡೋಣ.

ಪರಮಾತ್ಮನಿಗೆ ಅಚ್ಯುತನೆಂಬ ಹೆಸರು ಶ್ರೀ ವಿಷ್ಣು ಸಹಸ್ರನಾಮದಲ್ಲಿ ಬಂದಿದೆ.

"ಅಜಃ ಸರ್ವೇಶ್ವರಃ ಸಿದ್ಧಃ ಸಿದ್ಧಿಃ ಸರ್ವಾದಿರಚ್ಯುತಃ ॥

ಇಲ್ಲಿ ದೇಶತಃ ಕಾಲತಃ ಗುಣತಶ್ಚ ಚ್ಯುತಿರಹಿತತ್ವಾತ್ ಅಚ್ಯುತಃ ॥
ಮತ್ತು ಜ್ಞಾನಂ ನಿತ್ಯಂ ಕ್ರಿಯಾನಿತ್ಯಾಬಲಂ ಶಕ್ತಿಃ ಪರಾತ್ಮನಃ ।
ನಿತ್ಯಾನಂದೋಽವ್ಯಯಃ ಪೂರ್ಣೋಭಗವಾನ್ ವಿಷ್ಣುರಚ್ಯುತಃ ॥
ಅನುವ್ಯಾಖ್ಯಾನ (೧–೨–೭)

ಭಗವಂತನ ಜ್ಞಾನ, ಕ್ರಿಯಾ, ಬಲ, ಶಕ್ತ್ಯಾದಿಗಳು ನಿತ್ಯವಾಗಿವೆ. ಭಗವಂತನು ನಿತ್ಯಾನಂದನು, ಅವ್ಯಯನು, ಪೂರ್ಣನು ಇವನೇ ಅಚ್ಯುತ ಎಂಬ ಹೆಸರಿನಿಂದ ಪ್ರತಿಪಾದ್ಯನು ಎಂಬುದಾಗಿ ಶ್ರೀಮದಾಚಾರ್ಯರು ತಿಳಿಸಿರುವರು.

ಇಂಥ ಪರಮಾತ್ಮನ ಪಾದಗಳಲ್ಲಿ ನಿಷ್ಠೆಯುಳ್ಳವರ ಸಂಗ ದೊರಕಬೇಕು ಎನ್ನುತ್ತಾರೆ.

ಶಾಂತಾಃ ಸಮದೃಶಃ ಶುದ್ಧಾಃ ಸರ್ವಭೂತಾನು ರಂಜಕಾಃ ।
ಯಾಂತ್ಯಂಜಸಾಚ್ಯುತ ಪದಮ್ ಅಚ್ಯುತಪ್ರಿಯ ಬಾಂಧವಾಃ ॥
(ಶ್ರೀ ಭಾಗವತ ೪–೧೨–೩೭)

ಇಲ್ಲಿ ತಿಳಿಸಿದಂತೆ ಯಾರು ಶಾಂತರೋ, ಶುದ್ಧರೋ ಸರ್ವಪ್ರಾಣಿಗಳಲ್ಲಿ ದಯೆಯುಳ್ಳವರೋ ಎಲ್ಲ ಅಧಿಷ್ಠಾನಗಳಲ್ಲಿ ಪರಮಾತ್ಮನನ್ನು ನಿರ್ದೋಷವಾಗಿ ನೋಡುವರೋ ಅವರು ಅಚ್ಯುತನೆನಿಸಿದ ಶ್ರೀಹರಿಯ ಪಾದಗಳನ್ನು ಹೊಂದುತ್ತಾರೆ.

ಇಂಥವರ ಸಂಗವು ಆಗಬೇಕಾದುದು ಅವಶ್ಯವೇ ಸರಿ.

ಇನ್ನು ಶ್ರೀಮದ್‌ಭಾಗವತದಲ್ಲಿ–

ಸ್ತ್ರೀಣಾಂ ಸ್ತ್ರೀಸಂಗಿನಾಂ ಸಂಗಂ ತ್ಯಕ್ತ್ವಾ ದೂರತ ಆತ್ಮವಾನ್

ಎಂಬುದಾಗಿ ಹೇಳಿದ್ದಾರೆ. (೧೧-೧೪-೨೯)

ಶ್ರೀಮದಾಚಾರ್ಯರು ಶ್ರೀ ಭಾಗವತ ತಾತ್ಪರ್ಯದಲ್ಲಿ–

ಸ್ತ್ರೀ ಪದಕ್ಕೆ "ಕೇಶವೇತು ಅನ್ಯಥಾ ಬುದ್ಧಿಃ ಸ ಏವ ಸ್ತ್ರೀ ಪರಿಕೀರ್ತಿತಾ" ಎಂಬುದಾಗಿ ಹೇಳಿ ಪರಮಾತ್ಮನಲ್ಲಿ ಮಾಡುವ ಅನ್ಯಥಾಬುದ್ಧಿ– ಅಂದರೆ ಪರಮಾತ್ಮನು ಸ್ವತಂತ್ರನು ನಾವು ಅಸ್ವತಂತ್ರರು ಹೀಗೆ ತಿಳಿಯದೇ ನಾನೇ ಬ್ರಹ್ಮನು ಎಂಬುದಾಗಿ ಯಾರು ಚಿಂತನ ಮಾಡುವರೋ ಅವರ ಬುದ್ಧಿಗೆ ಸ್ತ್ರೀ ಎನ್ನುತ್ತಾರೆ. ಇಂಥವರ ಸಂಗವು ಎಂದಿಗೂ ಕೂಡದು. ಇದನ್ನು ಬಿಟ್ಟು "ಸ್ವತಂತ್ರೋ ಭಗವಾನ್ ವಿಷ್ಣುಃ" ಪರಮಾತ್ಮನು ಸ್ವತಂತ್ರನು. ಅವನು ಈಶ, ನಾವು ಅವನ ದಾಸರು ಹೀಗೆ ತಿಳಿಯುತ್ತ ಪರಮಾತ್ಮನ ಪಾದಕಮಲಗಳಲ್ಲಿ ನಿಷ್ಠೆಯನ್ನು ಹೊಂದಿರುವ ಸಾಧುಜನರ ಸಂಗವು ಅಪೇಕ್ಷಣೀಯವಾಗಿದೆ.

ಇನ್ನು "ಯದೃಚ್ಛಾಲಾಭ ತುಷ್ಟರ" ಪದದ ಔಚಿತ್ಯವನ್ನು ನೋಡೋಣ.

ಯದೃಚ್ಛೆಯಿಂದ ಅಂದರೆ ಪರಮಾತ್ಮನಿಂದ ಕೊಡಲ್ಪಟ್ಟ ಅನ್ನಾದಿ ವಿಷಯಗಳಲ್ಲಿ ತೃಪ್ತಿಯಿಂದ ಇರುವ ಸಾಧುಜನರ ಸಂಗವು ಅವಶ್ಯವಾಗಿದೆ.

ಯದೃಚ್ಛಾಪ್ರಾಪ್ತದ್ರವ್ಯೇಣ, ಯೇತು ಸಂತುಷ್ಟಾಃ ತೇಹ್ಯತ್ರಯೋಗ್ಯಾಃ ॥
(ಗಾರುಡ ವಚನ)

ಯದೃಚ್ಛೆಯಿಂದ ಬಂದ ದ್ರವ್ಯಾದಿಗಳಿಂದ ಯಾರು ಸಂತುಷ್ಟರಾಗಿರುವರೋ ಅವರು ಯೋಗ್ಯರೆನಿಸುತ್ತಾರೆ.

ಯದೃಚ್ಛಾಲಾಭ ಸಂತುಷ್ಟಸ್ಯ ತೇಜೋ ವಿಪ್ರಸ್ಯವರ್ಧತೇ ॥
(ಶ್ರೀ ಭಾಗವತ ೮-೧೯-೨೬)

ಎಂಬಂತೆ ಯದೃಚ್ಛಾಲಾಭ ಸಂತುಷ್ಟರಾದ ಬ್ರಾಹ್ಮಣರ ತೇಜಸ್ಸು ವರ್ಧಿಸುತ್ತದೆ.

ಯದೃಚ್ಛಾಲಾಭ ಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।
ಸಮಃ ಸಿದ್ಧಾವ ಸಿದ್ಧೌಚ ಕೃತ್ವಾಪಿ ನ ನಿಬಧ್ಯತೇ ॥ (ಶ್ರೀ ಗೀತಾ ೪-೨೨)

ಪ್ರಯತ್ನವಿಲ್ಲದೇ ಬಂದ ವಿಷಯಗಳಿಂದ ಸಂತುಷ್ಟನಾದ, ಫಲವು ಬಂದರೂ ಬಾರ ದಿದ್ದರೂ ಸುಖ ದುಃಖಗಳನ್ನು ಹೊಂದದೇ ಇರುವ, ಮಾತ್ಸರ್ಯರಹಿತನಾಗಿ ಇರುವ ಮನುಷ್ಯನು ಕರ್ಮಗಳನ್ನು ಮಾಡಿದಾಗ್ಯೂ ಕರ್ಮದಿಂದ ಬದ್ಧನಾಗುವದಿಲ್ಲ.

ಇಂಥ "ಯದೃಚ್ಛಾಲಾಭ ತುಷ್ಟರ" ಸಂಗವು ಲಭಿಸಲಿ ಎಂಬುದಾಗಿ ದಾಸರು ಹೇಳುತ್ತಾರೆ.

ಇನ್ನು "ನಿಶ್ಚಯ ಜ್ಞಾನವಂತರ" ಪದದ ಅರ್ಥವನ್ನು ನೋಡೋಣ.

೧. ಭಗವಂತನೇ ಸೃಷ್ಟ್ಯಾದಿ ವ್ಯಾಪಾರಗಳನ್ನು ಮಾಡತಕ್ಕವನು.

> ಉತ್ಪತ್ತಿ ಸ್ಥಿತಿ ಸಂಹಾರಾಃ ನಿಯತಿಜ್ಞಾನ ಮಾವೃತಿಃ ।
> ಬಂಧ ಮೋಕ್ಷೌಚ ಪುರುಷಾತ್ ಯಸ್ಮಾತ್ ಸಹರಿರೇಕ ರಾಟ್ ॥

ಎಂಬಂತೆ ಈ ಜಗತ್ತಿನ ಉತ್ಪತ್ತಿಯೇ ಮೊದಲಾದ ಎಂಟು ಕಾರ್ಯಗಳು ಭಗವಂತ ನಿಂದಲೇ ಆಗತಕ್ಕವು ಎಂಬ ನಿಶ್ಚಿತ ಜ್ಞಾನವು ಇರುವವರ ಸಂಗವಾಗಬೇಕು.

೨. ಭಗವಂತನೊಬ್ಬನೇ, ಅವನು ಸಮಾಧಿಕ ರಹಿತನು- ಸರ್ವೋತ್ತಮನು- ಏಕ ಮೇವಾದ್ವಿತೀಯಂ ಬ್ರಹ್ಮ—

> ವಿಷ್ಣೋಃ ಸರ್ವೋತ್ತಮತ್ವ ಏವ ಮಹಾ ತಾತ್ಪರ್ಯಂ ಸರ್ವಾಗಮಾನಾಂ ॥

ಎಂಬಂತೆ ಭಗವಂತನು ಅದ್ವಿತೀಯನಾಗಿದ್ದಾನೆ. ಎಲ್ಲ ವೇದಗಳ ಮಹಾತಾತ್ಪರ್ಯವು ವಿಷ್ಣುಸರ್ವೋತ್ತಮತ್ವವೇ ಆಗಿದೆ.

ಹೀಗೆ ನಿಶ್ಚಿತ ಜ್ಞಾನವುಳ್ಳವರ ಸಂಗವು ಭಗವಂತನಲ್ಲಿ ಭಕ್ತಿಯ ಅಭಿವೃದ್ಧಿಗೆ ಕಾರಣವಾಗುತ್ತದೆ.

೩. ತಾರತಮ್ಯೋಪೇತವಾಗಿ ಶ್ರೀಹರಿಯೇ ಸರ್ವೋತ್ತಮ ಎಂಬ ಜ್ಞಾನವುಳ್ಳವರು ನಿಶ್ಚಯ ಜ್ಞಾನವುಳ್ಳವರೆನಿಸುತ್ತಾರೆ.

ಇನ್ನು "ಅಚ್ಚ ಭಾಗವತರ" ಈ ಪದವನ್ನು ನೋಡೋಣ.

ಯಾರು ಸರ್ವಕರ್ಮಗಳನ್ನು ಶ್ರೀ ಹರಿಯ ಪ್ರೀತಿಯನ್ನು ಉದ್ದೇಶಿಸಿ ಮಾಡಿ ಶ್ರೀ ಹರಿಗೆ ಅರ್ಪಿಸುವರೋ ಅವರು ಭಾಗವತೋತ್ತಮರೆಂದು ಕರೆಸಿಕೊಳ್ಳುತ್ತಾರೆ.

> ಯೇ ಹಿತಾಸ್ಸರ್ವಜಂತೂನಾಂ ಗತಾಸೂಯಾ ಅಮತ್ಸರಾಃ ।
> ವಶಿನೋ ನಿಃಸ್ಪೃಹಾಃ ಶಾಂತಾಸ್ತೇವೈ ಭಾಗವತೋತ್ತಮಾಃ ॥
> (ಶ್ರೀನಾರದ ಮಹಾಪುರಾಣ)

ಎಲ್ಲ ಪ್ರಾಣಿಗಳಿಗೆ, ಹಿತವನ್ನು ಉಂಟು ಮಾಡುವವರು, ನಿಜವಾದ ಭಾಗವತರಲ್ಲಿ ಮಾತ್ಸರ್ಯವನ್ನು ಹೊಂದದಿರುವವರು, ಸ್ವಾರ್ಥ ದುರಾಸೆಗಳಿಲ್ಲದಿರುವವರು, ಸ್ವಭಾವ

ದಿಂದ ಶಾಂತರಾಗಿ ಇಂದ್ರಿಯಗಳನ್ನು ನಿಗ್ರಹಿಸಿಕೊಂಡಿರುವವರು ಭಾಗವತೋತ್ತಮರೆಂದು ಕರೆಸಿಕೊಳ್ಳುತ್ತಾರೆ.

ಕೆಳಗೆ ಕಾಣಿಸಿದ ೩೦ ಭಾಗವತ ಧರ್ಮಗಳನ್ನು ಅನುಷ್ಠಾನ ಮಾಡುವವರು ಅಚ್ಚ ಭಾಗವತರೆನಿಸಿಕೊಳ್ಳುತ್ತಾರೆ. ಇಂಥವರ ಸಂಗವು ಆಗಬೇಕಾದುದು ಅವಶ್ಯವು.

ಸರ್ವತೋ ಮನಸೋಽಸಂಗ ಮಾದೌ ಸಂಗಂ ಚ ಸಾಧುಷು ।
ದಯಾಂ ಮೈತ್ರೀಂ ಪ್ರಶ್ರಯಾಂ ಚ ಭೂತೇಷ್ವದ್ಧಾ ಯಥೋಚಿತಮ್ ॥
ಶೌಚಂ ತಪಸ್ತಿತಿಕ್ಷಾಂ ಚ ಮೌನಂ ಸ್ವಾಧ್ಯಾಯ ಮಾರ್ಜವಮ್ ।
ಬ್ರಹ್ಮಚರ್ಯ ಮಹಿಂಸಾಂ ಚ ಸಮತ್ವಂ ದ್ವಂದ್ವ ಸಂಜ್ಞಯೋಃ ।
ಸರ್ವತ್ರಾತ್ಮೇಶ್ವರಾನ್ವೀಕ್ಷಾಂ ಕೈವಲ್ಯಂ ಅನಿಕೇತನಮ್ ।
ವಿವಿಕ್ತಂ ಚೀರವಸನಂ ಸಂತೋಷಂ ಯೇನಕೇನಚಿತ್ ।
ಶ್ರದ್ಧಾಂ ಭಾಗವತೇ ಶಾಸ್ತ್ರೇ ಅನಿಂದಾಮನ್ಯತ್ರ ಚಾಪಿಹಿ ।
ಮನೋವಾಕ್ ಕರ್ಮದಂಡಂ ಚ ಸತ್ಯಂ ಶಮದಮಾವಪಿ ।
ಶ್ರವಣಂ ಕೀರ್ತನಂ ಧ್ಯಾನಂ ಹರೇರದ್ಭುತ ಕರ್ಮಣಃ ।
ಜನ್ಮಕರ್ಮ ಗುಣಾನಾಂ ಚ ತದರ್ಥೇಽಖಿಲಚೇಷ್ಟಿತಮ್ ।
ಇಷ್ಟಂ ದತ್ತಂ ತಪೋ ಜಪ್ತಂ ವೃತ್ತಂ ಯಚ್ಚಾತ್ಮನಃ ಪ್ರಿಯಮ್ ।
ದಾರಾನ್ ಸುತಾನ್ ಗೃಹಾನ್ ಪ್ರಾಣಾನ್ ಯತ್ ಪರಸ್ಮೈ ನಿವೇದನಮ್ ॥
(೧೧-೩-೨೩)

(೧) ಸರ್ವತಃ ಮನಸಃ ಅಸಂಗ (೨) ಸಾಧು ಜನರ ಸಂಗ (೩) ಸಜ್ಜನರಲ್ಲಿ ದಯೆ (೪) ಸಜ್ಜನರಲ್ಲಿ ಮಿತ್ರತೆ (೫) ಸಜ್ಜನರಲ್ಲಿ ಭಕ್ತಿ (೬) ಶೌಚ (೭) ತಪಸ್ಸು (೮) ತಿತಿಕ್ಷಾ (೯) ಮೌನ (೧೦) ಸ್ವಾಧ್ಯಾಯ (೧೧) ಆರ್ಜವ (೧೨) ಬ್ರಹ್ಮಚರ್ಯ (೧೩) ಅಹಿಂಸಾ (೧೪) ದ್ವಂದ್ವಸಮತ್ವ (೧೫) ಸರ್ವತ್ರ ಆತ್ಮೇಶ್ವರ ಅನ್ವೀಕ್ಷಾ (೧೬) ಕೈವಲ್ಯ (೧೭) ಅನಿಕೇತತೆ (೧೮) ವಿವಿಕ್ತತೆ (೧೯) ಚೀರ-ವಸನ (೨೦) ಸಂತೋಷ (೨೧) ಭಾಗವತ ಶಾಸ್ತ್ರದಲ್ಲಿ ಶ್ರದ್ಧೆ (೨೨) ಅನ್ಯಶಾಸ್ತ್ರ ನಿಂದೆ (೨೩) ಮನೋವಾಕ್ಕರ್ಮದಂಡ (೨೪) ಸತ್ಯ (೨೫) ಶಮ (೨೬) ದಮ (೨೭) ಶ್ರವಣ (೨೮) ಕೀರ್ತನ (೨೯) ಹರಿಯ ಧ್ಯಾನ (೩೦) ಸರ್ವಸಮರ್ಪಣೆ.

ಇನ್ನೊಂದು ವೈಶಿಷ್ಟ್ಯಪೂರ್ಣ ಲಕ್ಷಣವು ಹೀಗಿದೆ.

ದೇಹೇಂದ್ರಿಯ ಪ್ರಾಣಮನೋಧಿಯಾಂ ಯೋ
ಜನ್ಮಾಪ್ಯಯ ಕ್ಷುದ್ಭಯ ತರ್ಷ ಕೃಚ್ಛ್ರೈಃ ।
ಸಂಸಾರ ಧರ್ಮೈಃ ಅವಿಮುಹ್ಯಮಾನಃ
ಸ್ಮೃತ್ಯಾ ಹರೇಃ ಭಾಗವತ ಪ್ರಧಾನಃ ॥ (ಶ್ರೀ ಭಾಗವತ ೧೧-೨-೪೯)

ದೇಹೇಂದ್ರಿಯ ಪ್ರಾಣಮನೋಬುದ್ಧಿಗಳಿಂದ ಬಂದೊದಗುವ ಜನನ, ಮರಣ, ಹಸಿವೆ, ನೀರಡಿಕೆ, ಭಯ, ಆಸೆ, ಕಷ್ಟಗಳೆಂಬ ಸಂಸಾರ ಧರ್ಮಗಳ ಸ್ವರೂಪವನ್ನು ಸರಿಯಾಗಿ ತಿಳಿದು ಶ್ರೀ ಹರಿಯ ಸಂತತ ಸ್ಮರಣೆಯಿಂದ ನಿರ್ವಿಕಾರನಾಗಿರುವವನು ಭಾಗವತೋತ್ತಮನು. ಇಂಥವರ ಸಂಗವು ಅಪೇಕ್ಷಿತವಾದುದು.

ತಂತ್ರಸಾರ ಅಷ್ಟಮಹಾಮಂತ್ರ ಪರಿಪೂರ್ಣ ಸ್ನೇಹ ।
ಯಂತ್ರದಿಂದ ಮಾಡಿ ಜಗತ್‌ಸ್ವಾತಂತ್ರ್ಯನ ಗುರಿಮಾಡುವವರ ॥ ೨ ॥

ತಂತ್ರಸಾರೋಕ್ತ ಪೂಜೆಯನ್ನು ಮಾಡುತ್ತ ಅಷ್ಟಮಹಾಮಂತ್ರಗಳನ್ನು ತಪ್ಪದೇ ನಿತ್ಯವೂ ಮಾಡುತ್ತ ಪರಮಾತ್ಮನಲ್ಲಿ ಇತರ ಎಲ್ಲ ವಸ್ತುಗಳಿಗಿಂತಲೂ ಅಧಿಕಾಧಿಕ ಸ್ನೇಹವನ್ನು ಮಾಡುತ್ತ ಈ ಜಗತ್ತಿನಲ್ಲಿ ಸ್ವತಂತ್ರನಾದವನು ಪರಮಾತ್ಮನೊಬ್ಬನೇ ಎಂಬುದಾಗಿ ತಿಳಿಯುವವರ ಸಂಗವಾಗಲಿ ಎಂದು ದಾಸರು ತಿಳಿಸಿದ್ದಾರೆ. ಈಗ "ತಂತ್ರಸಾರ"ದ ಬಗ್ಗೆ ಸ್ವಲ್ಪ ತಿಳಿದುಕೊಳ್ಳೋಣ.

"ತಂತ್ರ" ವೆಂದರೆ—

ತನೋತಿ ವಿಪುಲಾನರ್ಥಾನ್ ತಂತ್ರಮಂತ್ರ ಸಮನ್ವಿತಾನ್ ।
ತ್ರಾಣಂ ಚ ಕುರುತೇ ಯಸ್ಮಾತ್ ತಂತ್ರಮಿತ್ಯಭಿಧೀಯತೇ ॥

ಮಂತ್ರಜ್ಞಾನ, ತಂತ್ರಜ್ಞಾನ ಮೊದಲಾದ ಅನೇಕಾರ್ಥಗಳನ್ನು ತೋರಿಸುತ್ತ ಭಯದಿಂದ ರಕ್ಷಣೆ ನೀಡುವ ಈ ಶಾಸ್ತ್ರವು "ತಂತ್ರಶಾಸ್ತ್ರ" ವೆಂದು ಹೇಳಲ್ಪಡುತ್ತದೆ.

ಇನ್ನು ತಂತ್ರಸಾರವೆಂದರೇನು ವಿಚಾರಿಸುವಾ.

ಶ್ರೀ ಹರಿಯು ಮೂಲರೂಪದಿಂದ ತನ್ನ ಮಗನಾದ ಚತುರ್ಮುಖನಿಗೆ ಉಪದೇಶಿಸಿದ ಅತಿ ವಿಸ್ತೃತವಾದ ಗ್ರಂಥದ ಹೆಸರು "ತಂತ್ರಸಾರ" ವಾಗಿದೆ. ಇದರಲ್ಲಿಯ ಮುಖ್ಯ ಅಂಶಗಳನ್ನು ತೆಗೆದುಕೊಂಡು ಶ್ರೀಮದಾಚಾರ್ಯರು ಸಂಗ್ರಹರೂಪವಾದ "ತಂತ್ರಸಾರ" ವೆಂಬ ಗ್ರಂಥವನ್ನು ನಮಗೆ ಕೊಟ್ಟು ಉಪಕರಿಸಿದ್ದಾರೆ.

ವಿಷ್ಣುರ್ವರಿಷ್ಠೋ ದೇವಾನಾಂ ಹ್ರದಾನಾಮ್ ಉದಧಿರ್ಯಥಾ ।
ತಥಾಸಮಸ್ತ ಶಾಸ್ತ್ರಾಣಾಂ ತಂತ್ರಶಾಸ್ತ್ರಮನುತ್ತಮಮ್ ॥

ದೇವತೆಗಳಲ್ಲಿ ವಿಷ್ಣುವು ಹೇಗೆ ಶ್ರೇಷ್ಠನೋ, ದೊಡ್ಡ ಮಡುವುಗಳಲ್ಲಿ ಸಮುದ್ರವು ಹೇಗೆ ಶ್ರೇಷ್ಠವೋ ಹಾಗೆ ಸಮಸ್ತ ಶಾಸ್ತ್ರಗಳಲ್ಲಿ ತಂತ್ರಸಾರವು ಶ್ರೇಷ್ಠವು.

ಶ್ರೀ ಸುಮಧ್ವವಿಜಯ ಮಹಾಕಾವ್ಯದಲ್ಲಿ 'ತಂತ್ರಸಾರ' ವನ್ನು ಕುರಿತು ಹೀಗೆ ಹೇಳಿದ್ದಾರೆ.

ಕಸ್ತಂತ್ರಸಾರಂ ಸಂಪ್ರಾಪ್ಯ ನ ಸ್ಯಾತ್ ಪರ್ಯಾಪ್ತವಾಂಛಿತಃ ।
ಅಮರ್ಯೈರಾಶ್ರಿತಚ್ಛಾಯಂ ಕಲ್ಪದ್ರುಮ ಮಿವೋತ್ತಮಂ ॥ (೧೫-೭೮)

ದೇವತೆಗಳಿಂದ ಆಶ್ರಯಿಸಲ್ಪಡುವ ನೆರಳನ್ನು ಹೊಂದಿದ ಕಲ್ಪವೃಕ್ಷದಂತೆ ಉತ್ತಮವೂ ದೇವತೆಗಳಿಂದ ಅಂಗೀಕೃತವಾದ ಸಿದ್ಧಾಂತವನ್ನು ಹೊಂದಿರುವದೂ ಆದ ತಂತ್ರ ಸಾರವು ಸಕಲ ಅಭೀಷ್ಟಗಳನ್ನು ಪೂರೈಸುತ್ತದೆ.

ಇಂಥ "ತಂತ್ರಸಾರ" ಗ್ರಂಥದಲ್ಲಿ ತಿಳಿಸಿದಂತೆ ಶ್ರೀ ಹರಿಯ ಪೂಜೆಯನ್ನು ನಡೆಸುವವರ ಸಂಗವು ಆಗಬೇಕೆಂಬುದು ದಾಸರ ಆಶಯವಾಗಿದೆ.

ಇನ್ನು ಅಷ್ಟಮಹಾಮಂತ್ರಗಳು ಹೀಗಿವೆ.

ಪ್ರಣವೋ ಮಾತೃಕಾಷ್ಟಾರ್ಣೋ ವ್ಯಾಹೃತಿರ್ದ್ವಾದಶಾಕ್ಷರಃ ।
ಗಾಯತ್ರೀ ಪೌರುಷಂ ವಿಷ್ಣೋಃ ಮಹಾಮಂತ್ರಾಃ ಪ್ರಕೀರ್ತಿತಾಃ ॥ (೮-೩)
(ಚಾತುರ್ಮಾಸ್ಯ ವರಾಹಕಲ್ಪ)

೧) ಪ್ರಣವಮಂತ್ರ ೨) ಮಾತೃಕಾಮಂತ್ರ ೩) ಅಷ್ಟಾಕ್ಷರೀ ಮೂಲಮಂತ್ರ ೪) ವ್ಯಾಹೃತಿಮಂತ್ರ ೫) ದ್ವಾದಶಾಕ್ಷರೀಮಂತ್ರ ೬) ಗಾಯತ್ರೀಮಂತ್ರ ೭) ಪುರುಷಮಂತ್ರ ಮತ್ತು ೮) ವಿಷ್ಣುಮಂತ್ರ ಇವು ಅಷ್ಟಮಹಾಮಂತ್ರಗಳೆಂದು ಪ್ರಸಿದ್ಧವಾಗಿವೆ. ಇಲ್ಲಿ–

೧) ಓಂ ಎಂಬುದು ಪ್ರಣವಮಂತ್ರ.

೨) ಅಕಾರಾದಿ ವರ್ಣಮಾಲೆಯು ಮಾತೃಕಾಮಂತ್ರ.

೩) ಓಂ ನಮೋ ನಾರಾಯಣಾಯ ಇದು ಅಷ್ಟಾಕ್ಷರೀ ಮೂಲಮಂತ್ರ.

೪) ಓಂ ಭೂರ್ಭುವಸ್ವಃ ಎಂಬುದು ವ್ಯಸ್ತಸಮಸ್ತ ವ್ಯಾಹೃತಿಮಂತ್ರ.

೫) ಓಂ ನಮೋ ಭಗವತೇವಾಸುದೇವಾಯ ಇದು ದ್ವಾದಶಾಕ್ಷರ ಮಂತ್ರ.

೬) ತತ್ಸವಿತುರ್‌ವರೇಣ್ಯಂ ಭರ್ಗೋದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದಯಾತ್ ಎಂಬ ಬ್ರಹ್ಮ ಗಾಯತ್ರಿಮಂತ್ರ.

೭) ಓಂ ಸಹಸ್ರಶೀರ್ಷಾ ಪುರುಷಃ ಮೊದಲಾದ ಸಮಸ್ತ ಪುರುಷ ಸೂಕ್ತ ಮಂತ್ರ.

೮) ಓಂ ವಿಷ್ಣವೇನಮಃ ಎಂಬ ವಿಷ್ಣು ಷಡಕ್ಷರಮಂತ್ರ.

ಈ ಅಷ್ಟ ಮಹಾಮಂತ್ರಗಳನ್ನು ನಿತ್ಯದಲ್ಲಿ ಮಾಡುತ್ತಿರಬೇಕು. ಇಂಥವರ ಸಂಗ ದೊರಕಲಿ ಎನುತ್ತಾರೆ ದಾಸರು.

ಇಲ್ಲಿ ಪರಿಪೂರ್ಣ ಸ್ನೇಹ ಯಂತ್ರದಿಂದ ಕೂಡಿ ಎಂದಿದ್ದಾರೆ.

ಪರಮಾತ್ಮನಲ್ಲಿ ಪರಿಪೂರ್ಣ ಸ್ನೇಹ ಅಂದರೆ ಪರಿಪೂರ್ಣಭಕ್ತಿಯನ್ನು ಮಾಡಬೇಕು ಎಂದು ಅರ್ಥವಾಗುತ್ತದೆ.

ಸ್ನೇಹ – ಎಂಬ ಪದಕ್ಕೆ ಶ್ರೀಮದಾಚಾರ್ಯರು ಭಕ್ತಿ ಎಂಬುದಾಗಿ ತಿಳಿಸಿರುವದನ್ನು ಗಮನಿಸಬೇಕು.

ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ ।
ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನ ಚಾನ್ಯಥಾ ॥
(ಶ್ರೀ ಮ. ಭಾ. ತಾ. ನಿ.)

ಪರಮಾತ್ಮನ ಮಾಹಾತ್ಮ್ಯಜ್ಞಾನವನ್ನು ಅರಿತುಕೊಂಡು, ಅವನೇ ಎಲ್ಲರಿಗಿಂತ ಸರ್ವೋತ್ತಮನೆಂದು ದೃಢವಾಗಿ ನಂಬಿ ಪರಮಾತ್ಮನಲ್ಲಿ ಮಾಡುವ ಸ್ನೇಹವೇ ಭಕ್ತಿ ಎಂಬುದಾಗಿ ಕರೆಸಿಕೊಳ್ಳುತ್ತದೆ. ಇಂಥ ಭಕ್ತಿಯಿಂದಲೇ ಮುಕ್ತಿಯು ಸಾಧ್ಯ ಅನ್ಯಥಾ ದೊರೆಯಲಾರದು.

ಇಂಥ ಅನನ್ಯ ಭಕ್ತಿಯನ್ನು ಭಗವಂತನಲ್ಲಿ ಮಾಡಬೇಕಾದುದು ಅವಶ್ಯವು. ಕೊನೆಗೆ "ಜಗತ್ ಸ್ವಾತಂತ್ರ್ಯನ ಗುರಿ ಮಾಡುವವರ" ಎಂದಿದ್ದಾರೆ.

ಈ ಜಗತ್ತಿನಲ್ಲಿ ಸ್ವತಂತ್ರ ವಸ್ತುವು ಭಗವಂತನೊಬ್ಬನೇ.

ಸ್ವತಂತ್ರಮಸ್ವತಂತ್ರಂ ಚ ದ್ವಿವಿಧಂ ತತ್ತ್ವಮಿಷ್ಯತೇ ।
ಸ್ವತಂತ್ರೋ ಭಗವಾನ್ ವಿಷ್ಣುಃ ಭಾವಾಭಾವೌ ದ್ವಿಧೇತರತ್ ॥
(ತತ್ತ್ವಸಂಖ್ಯಾನ)

ಯಾರು ಭಗವಂತನನ್ನು ಹೊಂದುವುದನ್ನೇ ಗುರಿಯಾಗಿಟ್ಟುಕೊಂಡಿದ್ದಾರೋ ಅಂಥವರ ಸಂಗವು ಆಗಲಿ ಎನ್ನುತ್ತಾರೆ ಶ್ರೀ ದಾಸರು.

ಕಾಯೇನ ವಾಚಾ ಮನಸಾ ಮಾಡಿದ ಕರ್ಮಗಳು ಆ ಭಗವಂತನಿಗೇ ಅರ್ಪಿತವೆಂದು ನಿಶ್ಚಯಪೂರ್ವಕ ಮಾಡುವವರು ನಿಜವಾದ ಸಾಧುಗಳೆನಿಸುತ್ತಾರೆ.

ಕರ್ಮಣಾ ಮನಸಾ ವಾಚಾ ಯಾ ಚೇಷ್ಟಾ ಮಮ ನಿತ್ಯಶಃ ।
ಕೇಶವಾರಾಧನೇ ಸಾಸ್ತ್ವಾತ್ ಜನ್ಮಜನ್ಮಾಂತರೇಷ್ವಪಿ ॥

ಎಂಬುದಾಗಿ ಹೇಳುವ ಸಜ್ಜನರ ಸಂಗವಾಗಲಿ ಎಂಬುದಾಗಿ ತಿಳಿಸಿದ್ದಾರೆ.

ಪಂಚ ಸಂಸ್ಕಾರ ಭೇದ ಪಂಚಯುಕ್ತರಾಗಿ ಪ್ರ
ಪಂಚಸೂತ್ರ ಪ್ರಸನ್ನ ವೆಂಕಟ ಪಂಚಬಾಣನಯ್ಯನವರ ॥ ೩ ॥

ಪಂಚಸಂಸ್ಕಾರಗಳನ್ನು ಹೊಂದಿ ಪಂಚಭೇದಗಳನ್ನು ಅರಿತವರಾಗಿ ಈ ಪ್ರಪಂಚಕ್ಕೆ ಸೂತ್ರಧಾರನಾದ ಕಾಮನ ತಂದೆಯಾದ ಪ್ರಸನ್ನ ವೆಂಕಟನನ್ನು ಯಾರು ನಂಬಿ

ದ್ದಾರೋ, ಯಾರು ಭಜಿಸುತ್ತಾರೋ ಅಂಥವರ ಸಂಗವು ಆಗಲಿ ಎಂಬುದಾಗಿ ಶ್ರೀ ದಾಸರು ಇಲ್ಲಿ ತಿಳಿಸಿರುವರು.

ಮೊದಲನೆಯದಾಗಿ ಪಂಚಸಂಸ್ಕಾರಗಳು ಯಾವವು ? ಎಂಬುದನ್ನು ವಿಚಾರಿಸುವಾ.

"ತಾಪಃ ಪುಂಡ್ರಸ್ತಥಾ ನಾಮಮಂತ್ರೋಯಾಗಶ್ಚ ಪಂಚಮಃ" ಎಂಬಂತೆ ವೈಷ್ಣವರಿಗೆ ಆಗಬೇಕಾದ ಅವಶ್ಯ ಸಂಸ್ಕಾರಗಳು ಐದು ಎಂದು ತಿಳಿಯಬೇಕು.

[ಪ್ರತಿಯೊಬ್ಬರಿಗೂ ಷೋಡಶ ಸಂಸ್ಕಾರಗಳು ಆಗಲೇಬೇಕು. ಇವುಗಳಲ್ಲದೇ ಈ ಐದು ಸಂಸ್ಕಾರಗಳು ಅತೀ ಅವಶ್ಯವೆಂದು ಪರಿಗಣಿಸಿದ್ದಾರೆ.]

೧) ತಪ್ತಮುದ್ರಾಧಾರಣ.

೨) ಊರ್ಧ್ವಪುಂಡ್ರಧಾರಣ.

೩) ಆಚಾರ್ಯರಿಂದ (ಗುರುಗಳಿಂದ) ಮಾಡಲ್ಪಟ್ಟ ದಾಸಾಂತ ನಾಮಕರಣವು ನಾಮ.

೪) ಆಚಾರ್ಯರಿಂದ ( ಗುರುಗಳಿಂದ ) ಮಂತ್ರೋಪದೇಶ ಪಡೆಯುವದು ಮಂತ್ರ.

೫) ಆಚಾರ್ಯರಿಂದ (ಗುರುಗಳಿಂದ) ಅನುಗ್ರಹಿಸಲ್ಪಟ್ಟ ದೇವತಾಪೂಜಾಧಿಕಾರವು ಯಾಗ.

ಇನ್ನು ಪಂಚಭೇದಗಳನ್ನು ಅರಿತವರಾಗಿರಬೇಕು. ಕಾರಣವೆಂದರೆ—

ಅದೃಷ್ಟೇ ಜೀವಪರಯೋಃ ಭೇದಸ್ಯಾಪ್ನೋತಿ ಸಂಸೃತಿಂ ।
ಅಭೇದ ನಿಶ್ಚಯಾದ್ಯಾತಿ ತಮಃ ನಾಸ್ತ್ಯತ್ರ ಸಂಶಯಃ ॥

ಎಂಬ ಪ್ರಮಾಣದಿಂದ. ಜೀವ ಪರಮಾತ್ಮರ ಭೇದದ ಅಜ್ಞಾನದಿಂದ ಸಂಸಾರವೆಂದೂ ಜೀವ ಪರಮಾತ್ಮರ ಅಭೇದ ನಿಶ್ಚಯದಿಂದ ತಮಸ್ಸೆಂದು ತಿಳಿದುಬರುತ್ತದೆ. ಪಂಚಭೇದಗಳು ಹೀಗಿವೆ.

ಜೀವೇಶ್ವರ ಭಿದಾಚೈವ ಜಡೇಶ್ವರ ಭಿದಾತಥಾ ।
ಜೀವಭೇದೋ ಮಿಥಶ್ಚೈವ ಜಡಜೀವ ಭಿದಾತಥಾ ।।
ಮಿಥಶ್ಚಜಡಭೇದೋಽಯಂ ಪ್ರಪಂಚೋ ಭೇದ ಪಂಚಕಃ ॥
(ಶ್ರೀ ಮ. ತಾ. ನಿರ್ಣಯ) (ಪರಮಶ್ರುತಿ)

(೧) ಜೀವ-ಪರಮಾತ್ಮ (೨) ಜಡ ಪರಮಾತ್ಮ (೩) ಜಡ-ಜೀವ (೪) ಜೀವ-ಜೀವ (೫) ಜಡ-ಜಡ ಹೀಗೆ ಐದು ವಿಧ ಭೇದಗಳು ಎಂದು ತಿಳಿಯಬೇಕು.

ಇಲ್ಲಿ ಪ್ರಪಂಚ ಎಂಬುದಕ್ಕೆ ಪ್ರಕೃಷ್ಟಃ ಪಂಚವಿಧೋ ಭೇದಃ ಪ್ರಪಂಚಃ ಎಂಬುದಾಗಿ ತಿಳಿಯಬೇಕು.

ಇಂಥ ಪ್ರಪಂಚಕ್ಕೆ ಪರಮಾತ್ಮನು ಸೂತ್ರಧಾರನಾಗಿದ್ದಾನೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಳಿರುವದನ್ನು ಇಲ್ಲಿ ಸ್ಮರಿಸಬಹುದು.

ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।
ಮಯಿಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ (೭–೭)

ಪರಮಾತ್ಮನಿಂದ ಭಿನ್ನವಾದ ಸರ್ವೋತ್ತಮವಾದ ವಸ್ತುವು ಒಂದಾದರೂ ಇರುವುದಿಲ್ಲ. ಈ ಪ್ರಕೃತಿಯೇ ಮೊದಲಾದ ಸಮಸ್ತ ಜಗತ್ತು ದಾರದಲ್ಲಿ ಪೋಣಿಸಿದ ಮಣಿ ಸಮುದಾಯದಂತೆ ಪರಮಾತ್ಮನನ್ನೇ ಆಶ್ರಯಿಸಿರುತ್ತದೆ.

ಪಂಚಬಾಣನೆಂದರೆ ಕಾಮನು. ಕಾಮನೇ ಪ್ರದ್ಯುಮ್ನನೆಂಬ ಹೆಸರಿನಿಂದ ಶ್ರೀ ರುಕ್ಮಿಣೀದೇವಿಯರಲ್ಲಿ ಜನ್ಮ ಪಡೆದಿದ್ದಾನೆ. ಕಾರಣ ಪಂಚಬಾಣನಯ್ಯ ಎಂದರೆ ಶ್ರೀಕೃಷ್ಣನೇ ಆಗಿದ್ದಾನೆ.

ಹೀಗೆ ಈ ಪ್ರಪಂಚಕ್ಕೆ ಸೂತ್ರಧಾರನೆನಿಸಿದ ಶ್ರೀಕೃಷ್ಣನ ಪ್ರೀತಿಪಾತ್ರರಾದ ಭಕ್ತರ, ಸಾಧುಜನರ ಸಂಗವಾಗಲಿ ಎಂಬುದಾಗಿ ಶ್ರೀ ಪ್ರಸನ್ನ ವೆಂಕಟದಾಸರು ಇಲ್ಲಿ ಮನವರಿಕೆ ಮಾಡಿಕೊಟ್ಟಿದ್ದಾರೆ.

ಶ್ರೀ ಮಧ್ವೇಶಾರ್ಪಣಮಸ್ತು

# ಅನುಬಂಧ ೧

## ಶ್ರೀ ಭಗವಂತನ ದಶಾವತಾರ

ತಿರುಪತಿ ತಿಮ್ಮಪ್ಪನ ಅನಂತಾನಂತರೂಪಗಳನ್ನು ನಾನಾ ಬಗೆಯಲ್ಲಿ ನಾನಾ ಭಾವಗಳಲ್ಲಿ ನಮ್ಮ ಹರಿದಾಸರು ಬಣ್ಣಿಸಿದ್ದಾರೆ. ಅದರಲ್ಲೂ ವಿಶೇಷವಾಗಿ "ದಶಾವತಾರದ ವರ್ಣನೆ"ಯನ್ನು ಮಾಡದ ಹರಿದಾಸರೇ ಇಲ್ಲವೆನ್ನಬಹುದು. ಪ್ರತಿಯೊಬ್ಬರೂ ಪುರಾಣಾಂತರ್ಗತವಾದ ಕಥೆಗಳ ಆಧಾರದಿಂದ ಹರಿಭಕ್ತಿ ಸುಧೆಯ ಹೊನಲನ್ನೇ ಹರಿಸಿದ್ದಾರೆ. ವಿಷಯವು ಒಂದೇ ಎನಿಸಿದರೂ ಅವರವರ ಅನುಭವ ಸಾಕ್ಷಾತ್ಕಾರ ಇತ್ಯಾದಿಗಳು ಬೇರೆ ಬೇರೆಯಾಗಿವೆ. ದುಷ್ಟನಿಗ್ರಹ, ಶಿಷ್ಟಪರಿಪಾಲನೆಗಾಗಿ ಪರಮಾತ್ಮನು "ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ" ಹೀಗೆ ಹತ್ತು ಅವತಾರಗಳನ್ನು ಹೊಂದಿರುವನು. ಪರಮಾತ್ಮನ ಲೀಲಾವಿಲಾಸಗಳಲ್ಲಿ "ದಶಾವತಾರ ಲೀಲೆ"ಯು ಹೆಚ್ಚಿನ ಮಹತ್ವ ಪಡೆದಿದೆ. ಅಂತೆಯೇ ನಮ್ಮ ಹರಿದಾಸರು ದಶಾವತಾರದ ವರ್ಣನೆಯನ್ನು ಸರ್ವತ್ರ ಮನತಣಿಯುವಂತೆ ವರ್ಣಿಸಿದ್ದು ಕಂಡುಬರುತ್ತದೆ.

ಶ್ರೀ ಪ್ರಾಣೇಶದಾಸರು ಪುರಾಣಗಳಲ್ಲಿ ಉಕ್ತವಾದ ವಿಷಯವನ್ನು ಆಯ್ದು ದಶಾವತಾರಗಳ ಕಾಲ ದಿನಗಳನ್ನು ಕೆಳಗಿನಂತೆ ವರ್ಣನೆ ಮಾಡಿರುವರು.

ಕೃತಯುಗ ಪ್ರಭವ ಮಧು ಶುದ್ಧ ಪ್ರತಿಪದ ಜಲಧಿ
ಸುತವಾರ ರೇವತಿ ವಿಷ್ಕಂಭ ಹಗಲು ಸಂಯುತ
ಹನ್ನೆರಡು ಗಳಿಗೆಗವತರಿಸಿ ಶ್ರೀಮತ್ಸ್ಯ-
ಹತವಹಾಡಿ ತಮನೆಂಬ ನಾ ।
ಚತುರಾಸ್ಯ ವೈವಸ್ವತಗೊಲಿದು ಮೆರೆದ ನೀ ।
ಕ್ಷಿತಿಯೊಳಗೆ ಮತ್ತಾಯುಗದಿ ಕಾರ್ಮ ರೂಪದಿಂ ।
ಚ್ಯುತಿರಹಿತನವತಾರ ಮಾಡಿ ಮಹಾಡಿ-
ದುಪಕಾರ ಮತಿವಂತರಿಗೆ ಪೇಳುವೆ ॥

ಇನ್ನು ಮೊದಲನೆಯದಾಗಿ ಶ್ರೀಮನ್‌ಮಧ್ವಾಚಾರ್ಯರು ತಮ್ಮ "ದ್ವಾದಶ ಸ್ತೋತ್ರ"ವೆಂಬ ಕೃತಿಯ ಆರು ಹಾಗೂ ಒಂಭತ್ತನೆಯ ಅಧ್ಯಾಯಗಳಲ್ಲಿ ಬೇರೆ ಬೇರೆ ಧಾಟಿಗಳಲ್ಲಿ ದಶಾವತಾರದ ವರ್ಣನೆಯನ್ನು ಮಾಡಿರುತ್ತಾರೆ.

ಆರನೆಯ ಅಧ್ಯಾಯದಲ್ಲಿ ಬರುವ "ದಶಾವತಾರ ಸ್ತೋತ್ರ" ವನ್ನು ಖಂಡ ಜಾತಿ ತ್ರಿಪುಟಿ ತಾಳದಲ್ಲಿ ಹಾಡಬೇಕು ಎಂಬುದು ಸಂಗೀತ ವಿದ್ವಾಂಸರಾದ ಶ್ರೀ ವಾಸುದೇವಾಚಾರ್ಯರ ಅಭಿಪ್ರಾಯವಾಗಿದೆ. [ವಿಶಾಹಿತಿಗಾಗಿ June-1957 ರ 'ಪರಿಮಳ' ಸಂಚಿಕೆಯನ್ನು ನೋಡಬಹುದು].

ದಶಾವತಾರ ಸ್ತೋತ್ರ ಹೀಗಿದೆ—

ಮತ್ಸ್ಯಕರೂಪಲ ಯೋದವಿಹಾರಿನ್
ವೇದವಿನೇತ್ರ ಚತುರ್ಮುಖ ವಂದ್ಯ ।
ಕೂರ್ಮಸ್ವರೂಪಕ ಮಂದರಧಾರಿನ್
ಲೋಕ ವಿಧಾರಕ ದೇವವರೇಣ್ಯ ॥

..........................................

ದೈತ್ಯವಿಮೋಹಕ ನಿತ್ಯ ಸುಖಾದೇ
ದೇವ ಸುಬೋಧಕ ಬುದ್ಧ ಸ್ವರೂಪ ।
ದುಷ್ಟಕುಲಾಂತಕ ಕಲ್ಕಿ ಸ್ವರೂಪ
ಧರ್ಮವಿವರ್ಧನ ಮೂಲ ಯುಗಾದೇ ॥

ಒಂಭತ್ತನೆಯ ಅಧ್ಯಾಯದಲ್ಲಿ ಬರುವ ವರ್ಣನೆ ಹೀಗಿದೆ—

ಪ್ರಚಲಿತ ಲಯ ಜಲವಿಹರಣ ಶಾಶ್ವತ
ಸುಖಮಯ ಮೀನ ಹೇ ಭವ ಮಮ ಶರಣಮ್ ।
ಶುಭತಮ ಕಥಾಶಯ ಪರಮ ಸದೋದಿತ
ಜಗದೇಕ ಕಾರಣ ರಾಮ ರಮಾರಮಣ ॥

..........................................

ಕಲಿಮಲ ಹುತವಹ ಸುಭಗ ಮಹೋತ್ಸವ
ಶರಣದ ಕಲ್ಕೀಶ ಹೇ ಭವಮಮ ಶರಣಮ್ ।
ಶುಭತಮ ಕಥಾಶಯ ಪರಮ ಸದೋದಿತ
ಜಗದೇಕ ಕಾರಣ ರಾಮ ರಮಾರಮಣ ॥

ಶ್ರೀಮಧ್ವಾಚಾರ್ಯರು ಮಾಡಿದ ಈ ದಶಾವತಾರದ ವರ್ಣನೆಯೇ ಕನ್ನಡ ದಾಸ ಸಾಹಿತ್ಯಕ್ಕೆ ಹೆಚ್ಚಿನ ಸ್ಫೂರ್ತಿಯನ್ನಿತ್ತಿರುವುದೆಂದು ಹೇಳಬಹುದು.

ಶ್ರೀ ವಾದಿರಾಜ ಪೂಜ್ಯ ಚರಣರು ಮಂಗಳ ಪದ್ಯವೊಂದರಲ್ಲಿ ಆ ಪರ ಮಾತ್ಮನ ದಶಾವತಾರದ ವರ್ಣನೆಯನ್ನು ಹೀಗೆ ಮಾಡಿದ್ದಾರೆ.

ವೇದವ ತಂದು ಬೆಟ್ಟವ ಪೊತ್ತು ಧರಣಿಯ
ಸಾಧಿಸಿ ಕಂಭದೊಳುದಿಸಿದಗೆ

ಭೂದಾನವ ಬೇಡಿ ನೃಪರ ಸಂಹರಿಸಿದ
ಆದಿ ಮೂರುತಿಗಾರುತಿಯೆತ್ತಿರೇ ।
ಇಂದುವದನೆ ಸೀತೆ ಸಹಿತಲರಣ್ಯದಿ
ನಂದಗೋಕುಲದಲ್ಲಿ ನಲಿದವಗೆ
ಮಂದಗಮನೆಯರ ಮುಂದೆ ನಿರ್ವಾಣದಿ
ನಿಂದ ಮೂರುತಿಗಾರತಿಯೆತ್ತಿರೇ ।
ತುರಗವನೇರಿ ದುಷ್ಟರ ಸೀಳಿ ಸುಜನರ
ಪೊರೆವ ಮಂಗಳ ಹಯವದನನಿಗೆ
ವರದವೇಲಾಪುರ ಚೆನ್ನಿಗರಾಯನ
ಚರಣಕಮಲಕಾರುತಿಯೆತ್ತಿರೇ ॥

ಶ್ರೀಪಾದರಾಯರು ಪರಮಾತ್ಮನಿಗೆ ಜೋಗುಳ ಹಾಡುತ್ತಲೇ ಈ ದಶಾವತಾರ ವರ್ಣನೆ ಮಾಡಿದ್ದಾರೆ,

ತಮನ ಮರ್ದಿಸಿ ವೇದತತಿಗಳನು ತಂದೆ
ಸುಮನಸರಿಗಾಗಿ ಮಂದರ ಪೊತ್ತು ತಂದೆ
ಕ್ಷಮೆಗಾಗಿ ಹೋಗಿ ಹಿರಣ್ಯಕನ ಕೊಂದೆ
ನಮಿಸಿ ಕರೆದರೆ ಕಂಬದಿಂ ಹೊರಟು ಬಂದೆ ।
ತರಳನಾಗಿ ಬಲಿಯ ದಾನವ ಬೇಡಿದೆ
ಪರಶು ಧರಿಸಿ ಕ್ಷತ್ರಿಯರ ಸವರಿದೆ
ದುರುಳ ರಾವಣನ ಶಿರವ ಚಂಡಾಡಿದೆ
ಚರಿಸಿ ಮನೆಗಳ ಪಾಲು ಮೊಸರನ್ನೇ ಕುಡಿದೆ. ।
ಬುದ್ಧನಾಗಿ ಪತಿವ್ರತೆಯರ ನಾಳಿದೆಯಲ್ಲ
ಮುದ್ದು ತುರಗವನೇರಿ ಕಲ್ಕಿನಾದೆಲ್ಲ
ಪದ್ಮನಾಭ ಸಿರಿ ಭಕ್ತವತ್ಸಲ
ನಿದ್ರೆಯ ಮಾಡಯ್ಯ ಶ್ರೀರಂಗವಿಠ್ಠಲ ॥

ನಿದ್ರೆಗೈಯುತ್ತಿರುವ ಆ ಶ್ರೀ ಹರಿಯನ್ನು "ಭೂಪಾಳಿ" ರಾಗದಿಂದ ಹಾಡಿ ಎಬ್ಬಿಸು ವಾಗಲೂ "ದಶಾವತಾರ" ವರ್ಣನೆಯೇ ಶ್ರೀ ಪುರಂದರದಾಸರಿಗೆ ಅಚ್ಚುಮೆಚ್ಚು.

ಏಳಯ್ಯ ಬೆಳಗಾಯಿತು ।

ವೇದವನು ತರಲೇಳು ಮಂದರವ ಪೊರಲೇಳು
ಛೇದಿಸುತಲಿ ಅಸುರರನು ದಾಡೆಯಿಂದ ಏಳು

ಕೇಡಿ ಹಿರಣ್ಯಕನ ಕರುಳ ಕೊರಳೊಳು ಧರಿಸೇಳು
ಕಾಯ್ದು ಬಲಿ ಬಾಗಿಲೊಳು ।
ಭೇದಿಸಿ ಭೂಮಿ ತ್ರಿಪಾದದಿಂದಳೆಯೇಳು
ಭೇದಿಸಿ ಕ್ಷತ್ರಿಯರ ಕೊಡಲಿಯಿಂದ ಕಡಿಯೇಳು
ಸಾಧಿಸಿ ಶರಧಿಯನು ಸೇತುವೆಯ ಕಟ್ಟೇಳು
ನಂದಗೋಪನ ಉದರದಿ ।
ಪುರ ಮೂರು ಗೆಲಿಬೇಕು । ಅರವಿಯನೆ ಕಳೆಯೇಳು
ದುರುಳನ ಕೊಲ್ಲಬೇಕು ತುರಗವಾಹನನಾಗು
ಪರಿಪರಿಯ ಕೆಲಸಗಳ ಮಾಡಲುದ್ಯೋಗಿಸಿ ।

ಮರೆದು ನಿದ್ರೆಯಗೈವರೇ ॥ ಏಳಯ್ಯ ಬೆಳಗಾಯಿತು—

ೇ ಕನಕದಾಸರು ಒಂದು ಜನಪದ ಗೀತೆಯಲ್ಲಿ ಪರಮಾತ್ಮನ "ದಶಾವತಾರದ" ಸ್ತೋತ್ರವನ್ನು ಬಹು ಸ್ವಾರಸ್ಯಮಯವಾಗಿ ಮಾಡಿದ್ದಾರೆ.

ದೇವಿ ನಮ್ಮ ದ್ಯಾವರು ಬಂದಾರೆ
ಬನ್ನಿರೇ ನೋಡಬನ್ನಿರೇ ॥ ಪ ॥

ಕೆಂಗಣ್ಣ ಮೀನನಾಗಿ ನಮ್ಮ ರಂಗ
ಗುಂಗಾಡಿ ಸೋಮನ ಕೊಂದಾನ್ಮ ।
ಗುಂಗಾಡಿ ಸೋಮನ ಕೊಂದು ವೇದವ
ಬಂಗಾರದೊಡಲಿಗಿತ್ತಾನ್ಮ ॥

..............................

ಚೆಲ್ವ ಹೆಂಡತಿಯ ಕುದುರೆಯ ಮಾಡಿ
ಒಳ್ಳೆಯ ರಾವುತನಾದಾನ್ಮ ।
ಒಳ್ಳೆಯ ರಾವುತನಾಗಿ ಮ್ಲೇಂಚ್ಛರ
ಡೊಳ್ಳ ಹೊಟ್ಟೆಯ ಮೇಲೆ ಒದ್ದಾನ್ಮ ॥

ವರೇ ತಮ್ಮ ಇನ್ನೊಂದು ಪದ್ಯದಲ್ಲಿ ಒಂದೊಂದು ಅವತಾರವನ್ನು ನಿಂದಾಸ್ತೋತ್ರ ರವಾಗಿ ಚಿತ್ರಿಸಿದ್ದಾರೆ.

ನಿನ್ನ ನಾನೇನೆಂದೆನೋ ರಂಗಯ್ಯಾ ರಂಗ
ನಿನ್ನ ನಾನೇನೆಂದನೋ ॥

ನಿನ್ನ ನಾನೇನೆಂದೆ ನಿಗಮ ಚೋರ ಸ್ವಾಮಿ ।
ಪನ್ನಂಗ ಶಯನ ಪಾಲ್ಗಡಲೊಡಯನೆ ರಂಗ ॥

ಧೀರ ಸೋಮಕ ವೇದಖಳನ ಸೀಳಿ
ವಾರಿಧಿಗಿಳಿದು ಪರ್ವತವನೆತ್ತಿ ।
ಧಾರುಣಿಯನ್ನು ಕದ್ದದನು ಜಗದಲ್ಲಣನಾದ
ನಾರಸಿಂಹ ನಮೋ ನಮೋ ಎಂದೆನಲ್ಲದೇ ।

ನೀರ ಪೊಕ್ಕವನೆಂದನೆ ಬೆನ್ನಿನ ಮೇಲೆ
ಭಾರ ಪೊತ್ತವನೆಂದನೆ
ಬೇರ ಮೆದ್ದವನೆಂದೆನೆ ರಕ್ಕಸನೊಳು
ಹೋರಿ ಹೊಯ್ದನೆಂದು ಪೊಗಳಿದೆನಲ್ಲದೆ ॥

..................................

ಚಿತ್ತಜಕೋಟಿ ಲಾವಣ್ಯತೇಜದಿ ಬಂದ
ಉತ್ತಮ ಸ್ತ್ರೀಯರ ವ್ರತವಳಿದು-
ಮತ್ತೆ ಕಲ್ಕಿಯಾಗಿ ಮಧುರಸ ಮಡುಹಿದ
ಹತ್ತಾವತಾರದ ಹರಿಯೆಂದೆನಲ್ಲದೆ ।

ಬತ್ತಲಿದ್ದವನೆಂದೆನೆ ತೇಜಿಯನೇರಿ
ಒತ್ತಿ ಆಳ್ದವನೆಂದೆನೆ ಬಾರಿ ಬಾರಿಗೂ
ಮತ್ತೆ ಪುಟ್ಟಿದವನೆಂದನೆ ಆದಿಕೇಶವ
ಭಕ್ತವತ್ಸಲನೆಂದು ಪೊಗಳಿದೆನಲ್ಲದೇ ॥

ಜಗನ್ನಾಥದಾಸರು ಈ ದಶಾವತಾರ ಪಡೆದ ಪರಮಾತ್ಮನನ್ನು "ರಕ್ಷಿಸು ಮಹಿಮನ" ಎಂಬುದಾಗಿ ಕೊಂಡಾಡಿದ್ದಾರೆ.

ರಮಾ ಮನೋಹರನೆ ಪತಿತ ಪಾವನಾ ।

ಚೆಂದದಿಂದ ವೇದ ತಂದ
ಮಂದರೋದ್ಧರಾ ಅರ
ವಿಂದ ನಯನ ಬಂಧು ರಕ್ಷಿಸೋ
ಇಂದು ಭೂಧರಾ ॥

ಕರುಳ ಮಾಲೆಯ ಧರಿಸಿದ ಶ್ರೀ
ವರದ ವಾಮನಾ ಧೃತ-
ಕರದ ಪರಶುರಾಮ. ರಾಘವ
ಯದುಕುಲೋತ್ತಮಾ ॥

ಲೋಕ ಮೋಹಕ ಬುದ್ಧನಾಗಿ
ತೇಜಿಯೇರಿದಾ ಜಗ

ದೇಶ ಜಗನ್ನಾಥ ವಿಠ್ಠಲ
ಭೀಕರಾಂತರಾ । ರಕ್ಷಿಸೋ ॥

ಶ್ರೀ ವಿಜಯದಾಸರು ತಮ್ಮ ಸುಳಾದಿಯೊಂದರಲ್ಲಿ ವರ್ಣಿಸುವ ಪರಿ ಹೀಗಿದೆ-

ಮೀನನಾಗಿ ಕಮಠನಾಗಿ ಸೂಕರನಾಗಿ
ಮಾನವ ಮತ್ತು ಸಿಂಗನಾಗಿ ದಾನ ಬೇಡುವನಾಗಿ ।
ಇವನೆ ಈವನಾಗಿ ಕಾನನ ವಾಸಿಯಾಗಿ ।
ಗೊಲ್ಲನಾಗಿ ದಿಗಂಬರನಾಗಿ ರಾವುತನಾಗಿ ತಿರುಗಿ ತಿರುಗಿ ॥

ಶ್ರೀ ವ್ಯಾಸರಾಯರು ಹತ್ತಾವತಾರದ ನಾರಾಯಣನೇ ಶರಣು ಶರಣು ಎಂದು ಹೇಳುತ್ತ

ಶರಣು ಮತ್ಸ್ಯನೇ ಕೂರ್ಮಕ್ರೋಡನೆ
ನರಹರಿಯೆ ವಟುಭಾರ್ಗವ ।
ಶರಣು ರಾಘವ ಕೃಷ್ಣ ಬುದ್ಧನೆ
ಶರಣು ಕಲ್ಕಿಯ ರೂಪನೇ ॥

ನಂಬಿದೆನು ನಾನಿನ್ನ ಕೇಶವ ನಾರಾಯಣನೇ ಮಾಧವಾ- ಎಂದು ಭಾವಪರವಶವಾಗಿ ವರ್ಣನೆ ಮಾಡಿದ್ದಾರೆ.

ಶ್ರೀ ಮಹಿಪತಿದಾಸರು ಕೋಲಿನ ಪದ್ಯದಲ್ಲಿ ಬಹು ಸುಂದರವಾಗಿ ಹತ್ತಾವತಾರ ವನ್ನು ವರ್ಣಿಸಿದ್ದಾರೆ.

ಶಿಕ್ಷಿಸಿ ನಿಗಮ ಚೋರ ರಾಕ್ಷಸನ ಕೊಂದು
ರಕ್ಷಿಸಿ ವೇದವನುಳುಹಿದ ಕೋಲೆ
ರಕ್ಷಿಸಿ ವೇದವನುಳುಹಿದ ಕ್ಷಿತಿಯೊಳು
ಮತ್ಸ್ಯಾವತಾರನೇ ಬಲಗೊಂಬೆ ಕೋಲೆ ॥

ಮಲ್ಲಮಾನ್ಯರನೆಲ್ಲ ಹಲ್ಲು ಮುರಿಯಲಾಗಿ
ನಲ್ಲ ತೇಜಿಯನೇರಿದ ಕೋಲೆ
ನಲ್ಲಾ ತೇಜಿಯನೇರಿದ ಬಲ್ಯಾನಾಗಿ
ಕಲ್ಕ್ಯಾವತಾರನಾ ಬಲಗೊಂಬೆ ಕೋಲೆ ॥

ಶ್ರೀ ಗೋಪಾಲದಾಸರು ಒಂದು ಉಗಾಭೋಗದಲ್ಲಿ ಅತಿ ಚಮತ್ಕಾರವಾಗಿ ದಶಾವ ತಾರದ ನಿಂದಾ ಸ್ತುತಿಯನ್ನು ಮಾಡಿರುತ್ತಾರೆ.

ನೀರಿನಲಿ ನಿಂತು ನಿಡಗುಟ್ಟುನಾರುವಗೆ ಗಂ ।
ಬರಿ ಕಸ್ತೂರಿ ಲೇಪನದ ಮಂದವೋ ।

ಭಾರ ಬೆನ್ನಲಿ ಪೊತ್ತು ಕಾಲುಕೈ ಮುದುರಿದಗೆ
ಧೀರ ಶೇಷ ಶಯನದ ಮದವೋ
ಮೋರೆಯಲಿ ನೆಲಕೆದರಿ ಬೇರುಗಳ ಮೆಲುವವಗೆ
ಸಾರ ಷಡ್ರಸ ಭೋಜನದ ಮದವೋ
ಕಾರು ಕರುಳನು ವನಮಾಲೆ ಹಾಕಿದಗೆ
ಹಾರ ಪದಕಾದಿಗಳ ಹಾಕಿದ ಮದವೋ ।
.................. ....................
ಊರೆಲ್ಲ ಬತ್ತಲೆಯಾಗಿ ನಿಂತವಗೆ
ಚಾರು ಪೀತಾಂಬರ ಉಡುವ ಮದವೋ
ಘೋರ ತುರಗವನೇರಿ ಹಾರಿಸ್ಯಾಡುವಗೆ
ವೀರ ಸಿಂಹಾಸನದಿ ಕುಳಿತಿರುವ ಮದವೋ ॥

ಶ್ರೀ ಪುರಂದರದಾಸರು ಭಗವಂತನನ್ನು ದಾಸಯ್ಯನ ರೂಪದಲ್ಲಿ ಕಂಡು ಮಾಡಿದ ಸ್ತೋತ್ರ ಅಂದವಾಗಿದೆ.

ಖಳನು ವೇದವನೊಯ್ಯೆ ಪೊಳೆವ ಕಾಯನಾದ ದಾಸಯ್ಯ ಬಂದ ಕಾಣೆ ।
ಘಳಿಗೆಲಿ ಕೂರ್ಮ ತಾನಾಗಿ ಗಿರಿಯ ಪೊತ್ತ ದಾಸಯ್ಯ ಬಂದ ಕಾಣೆ ।
..........................................................................
ಪುಂಡತನದಿ ಪೋಗಿ ಪುರವ ನುರುಪಿ ಬಂದ ದಾಸಯ್ಯ ಕಾಣೆ ।
ಲಂಡರ ಸದೆಯಲು ತುರಗವ ನೇರಿದ ದಾಸಯ್ಯ ಬಂದ ಕಾಣೆ ।
ಹಿಂಡು ವೇದಗಳಲ್ಲಿ ಅರಸಿ ನೋಡಲು ಸಿಗದ ದಾಸಯ್ಯ ಬಂದ ಕಾಣೆ ।
ಪಾಂಡುರಂಗ ನಮ್ಮ ಪುರಂದರವಿಠ್ಠಲ ದಾಸಯ್ಯ ಬಂದ ಕಾಣೆ ॥

ಶ್ರೀ ಹೆಳವನಕಟ್ಟೆ ಗಿರಿಯಮ್ಮನವರು ಭಾವಪೂರ್ಣರಾಗಿ ದಶಾವತಾರವನ್ನು ಹೀಗೆ ಬಣ್ಣಿಸಿದ್ದಾರೆ.

ಹೊನ್ನುತಾ ಗುಬ್ಬಿ ಹೊನ್ನು ತಾ । ನಮ್ಮ
ಚಿನುಮಯ ಮೂರುತಿ ಚೆಲುವ ರಂಗನ ಕೈಗೆ ।
ಆಗಮವನು ತಂದಾ ಜಗಕಿತ್ತ ಕೈಗೆ ।
ಸಾಗರವ ಮಥಿಸಿ ಸುಧೆ ಕುಡಿದ ಕೈಗೆ ।
..................................
ಪತಿವ್ರತೆಯರ ವ್ರತವನಳಿದಂಥ ಕೈಗೆ ।
ಹಿತವಾಜಿಯನೇರಿ ಮರ್ದಿಸಿದಂಥ ಕೈಗೆ ।
ಹೊನ್ನುತಾ ಗುಬ್ಬಿ ಹೊನ್ನು ತಾ ॥

ಶ್ರೀ ಕದರುಮಂಡಲಗಿ ದಾಸರು ಪರಮಾತ್ಮನನ್ನು ದಶಾವತಾರ ವರ್ಣನೆಯಿಂದ ಬರ ಮಾಡಿಕೊಳ್ಳುವದು ಅಂದವಾಗಿದೆ.

ಬಾರೋ ರಂಗ ಬಾರೋ । ಬಾರೋ ಕೃಷ್ಣ ಮನೆಗೆ ।
ಕಣ್ಣಬಿಡುವುತ ಕಠಿಣ । ಬೆನ್ನಿಲೆ ಗಿರಿಯಾನೆತ್ತಿ ।
ಮಣ್ಣಕೆದರುತ ಸಣ್ಣ । ಚೆನ್ನ ಪ್ರಹ್ಲಾದಗೊಲಿದ ।
ಬಲಿಯ ದಾನವ ಬೇಡಿ । ನೆಲವ ಮೂರಡಿ ಮಾಡಿ ।
ಛಲದಿ ಸತಿಯಳ ಕೂಡಿ । ಗೊಲ್ಲರೊಳಗೋಡಾಡಿ ।
ಬತ್ತಲೆ ತೇಜಿಯನೇರಿ । ಹತ್ತಿ ತಿರುವುತನಾಗಿ ।
ಉತ್ತಮ ಕದರುಂಡಲಿಗೀಶ । ಪೊರೆ ಕೃಷ್ಣ ಪಾಂಡುರಂಗ ॥

ಹೀಗೆ ವಿವಿಧ ಭಾವಭಂಗಿಗಳಲ್ಲಿ ಆ ಭಗವಂತನನ್ನು ಹೊಗಳಿ ಹಾಡಿದ ಸಾಹಿತ್ಯವೇ ಅಪ್ರತಿಮವಾದ ದಾಸಸಾಹಿತ್ಯವೆಂದು ಧಾರಾಳವಾಗಿ ಹೇಳಬಹುದು.

ಶ್ರೀ ಮಧ್ವೇಶಾರ್ಪಣಮಸ್ತು

# ಶ್ರೀ ಹನುಮ ಭೀಮ ಮಧ್ವರು

ಅನಿಲ ದೇವರ ಒಲುಮೆ ಸರ್ವರಿಗೂ ಅತ್ಯವಶ್ಯ. ಇದಕ್ಕೆ ಕಾರಣವನು ಶ್ರೀ ಜಗನ್ನಾಥದಾಸರು ಶ್ರೀ ಹರಿಕಥಾಮೃತಸಾರದಲ್ಲಿ ಹೀಗೆ ವಿವರಿಸಿದ್ದಾರೆ.

ಒಂದು ದಿನದೊಳಗನಿಲ ಇಪ್ಪ- ।
ತ್ತೊಂದು ಸಾವಿರದಾರುನೂರು ಮು ।
ಕುಂದನಾಜ್ಞೆಯಲಿ ಮಾಡಿ ಮಾಡಿಸಿ ಲೋಕಗಳ ಪೊರೆವ ।

ಅನಿಲದೇವರು ಹದಿನಾಲ್ಕು ಲೋಕಗಳ ಜೀವರಲ್ಲಿ ಅಪ್ಪನಂತೆ ಇದ್ದು ಒಂದು ದಿ ದಲ್ಲಿ ೨೧,೬೦೦ ಶ್ವಾಸ ಜಪಗಳನ್ನು ಮುಕುಂದನ ಆಜ್ಞೆಯ ಪ್ರಕಾರ ಮಾಡಿ ಮಾಡಿ ರಕ್ಷಿಸುವರು.

ದೇಹೇಽಪಿಯತ್ರ ಪವನೋಽತ್ರಹರಿರ್ಯತೋಽ ಸೌ ।
ತತ್ರೈವ ವಾಯುರಿತಿ ವೇದ ವಚಃ ಪ್ರಸಿದ್ಧಂ ॥ (ಶ್ರೀ ಮ. ಭಾ. ತಾ. ೧)

ಈ ಪ್ರಮಾಣದಂತೆ ವಾಯುದೇವರು ಎಲ್ಲಿ ಇರುವರೋ ಅಲ್ಲಿ ಶ್ರೀ ಹರಿಯು ವಾಸವಾಗಿರುತ್ತಾನೆ.

ವಾಯುದೇವರು ವೇದ ಪ್ರತಿಪಾದ್ಯರೇ ಎಂಬುದನ್ನು ಶ್ರೀ ವಾದಿರಾಜರು "ಈತನೇ ಲೋಕಗುರು ವೇದವಿಖ್ಯಾತಾ" ಎಂಬುದಾಗಿ ವರ್ಣಿಸಿರುತ್ತಾರೆ. ವಾಯು ದೇವರೇ ಆ ಪರಮಾತ್ಮನ ಆಜ್ಞೆಯನ್ನು ಶಿರಸಾವಹಿಸಿ ತ್ರೇತಾಯುಗದಲ್ಲಿ ಹನುಮಂತ ದೇವರಾಗಿ, ದ್ವಾಪರದಲ್ಲಿ ಭೀಮಸೇನರಾಗಿ ಮತ್ತು ಕಲಿಯುಗದಲ್ಲಿ ಮಧ್ವಾಚಾರ್ಯ ರೆಂಬ ಹೆಸರಿನಿಂದ ಅವತಾರ ಮಾಡಿದರು. ಕೊನೆಯದಾದ ಮಧ್ವಾವತಾರದಲ್ಲಿ ದುಃಶಾಸ್ತ್ರಗಳನ್ನು ಖಂಡಿಸಿ ವೇದ, ಉಪನಿಷತ್ತು, ಬ್ರಹ್ಮಸೂತ್ರಗಳು, ಗೀತಾ ಮೊದಲಾದವುಗಳಿಗೆ ಭಾಷ್ಯಗಳನ್ನು ಬರೆದು ಸರಿಯಾದ ಅರ್ಥವನ್ನು ಉಪದೇಶಿ ದರು. ಈ ಅವತಾರತ್ರಯ ಮಹಿಮೆಯು ಬಳಿತ್ಥಾಸೂಕ್ತದಲ್ಲಿ ಉಕ್ತವಾಗಿದೆ. ನಮ್ಮ ಹರಿದಾಸರು ಕೂಡ ಈ ಅವತಾರತ್ರಯ ಮಹಿಮೆಯನ್ನು ತಮ್ಮದೇ ಆ ವಿಶಿಷ್ಟವಾದ ಶೈಲಿಯಲ್ಲಿ ಹೊಗಳಿ ಹಾಡಿದ್ದಾರೆ. ಅವರವರ ವಾಣಿಯಿಂದಲೇ ಇ ಅವತಾರತ್ರಯ ಮಹಿಮೆಯನ್ನು ಕಾಣಬಹುದಾಗಿದೆ.

ಶ್ರೀ ಶ್ರೀಪಾದರಾಜರು ವಾಯುದೇವರ ಮೂಲರೂಪ ವರ್ಣನೆಯನು "ಮಧ್ವನಾಮ" ವೆಂಬ ಮೇರು ಕೃತಿಯಲ್ಲಿ-

ಜಯ ಜಯ ಜಗತ್ಪ್ರಾಣ ಜಗದೊಳಗೆ ಸುತ್ರಾಣ ।
ಅಖಿಲಗುಣ ಸದ್ಧಾಮ ಶ್ರೀ ಮಧ್ವನಾಮಾ ॥
ಆವ ಕಟ್ಟಪರೂಪದಿಂದಲಂಡೋದಕದಿ ಓವಿ ।
ಧರಿಸಿದ ಶೇಷ ಮೂರುತಿಯನು ॥
ಆವಾವನ ಬಳಿ ಪಿಡಿದು ಹರಿಯ ಸುರರೈದುವರೋ ।
ಆ ವಾಯು ನಮ್ಮ ಕುಲಗುರು ರಾಯರು । ಎಂಬುದಾಗಿ ತಿಳಿಸಿ–

ಮೊದಲವತಾರವಾದ ಹನುಮಂದವತಾರವನ್ನು ವರ್ಣಿಸುತ್ತ–

ತ್ರೇತೆಯಲಿ ರಘುಪತಿಯ ಸೇವೆ ಮಾಡುವೆನೆಂದು ।
ವಾತಸುತ ಹನುಮಂತನೆಂದೆನಿಸಿದ ।
ಪ್ರೋತ ಭಾವದಿ ತರಣಿ ಬಿಂಬಕ್ಕೆ ಲಂಘಿಸಿದ :
ಈತಗೆಣೆಯಾರು ಮೂರ್ಲೋಕದೊಳಗೆ– ಎನ್ನುತ್ತಾರೆ.

ದ್ವಿತೀಯ ಅವತಾರವನ್ನು–

ಆ ಮಾರುತನೆ ಭೀಮನೆನಿಸಿ ದ್ವಾಪರದಲ್ಲಿ ।
ಸೋಮಕುಲದೊಳು ಜನಿಸಿ ಪಾರ್ಥರೊಡನೆ ।
ಭೀಮ ವಿಕ್ರಮ ರಕ್ಕಸರ ಮುರಿದೊಟ್ಟಿದ ।
ಆ ಮಹಿಮ ನಮ್ಮ ಕುಲಗುರು ರಾಯರು ॥ ಎಂಬುದಾಗಿ ವರ್ಣಿಸಿ–

ಮಧ್ವಾವತಾರವನ್ನು–

ದಾನವರು ಕಲಿಯುಗದೊಳವತರಿಸಿ ವಿಬುಧರೊಳು ।
ವೇನನಾ ಮತವನರುಹಲದನರಿತು ।
ಜ್ಞಾನಿ ತಾ ಪವಮಾನ ಭೂತಳದೊಳವತರಿಸಿ–
ಮಾನನಿಧಿ ಮಧ್ವಾಖ್ಯನೆಂದೆನಿಸಿದ ।

ಎಂಬ ಪದ್ಯದಿಂದ ವರ್ಣಿಸಿದ್ದಾರೆ

ಇನ್ನು ವಾದಿರಾಜ ಪೂಜ್ಯ ಚರಣರು ಹನುಮಂತದೇವರ ಸಾಹಸವನ್ನು ಹೊಗಳುವದು ಬಲು ಅಂದವಾಗಿ ಮೂಡಿ ಬಂದಿದೆ.

ಎಷ್ಟು ಸಾಹಸವಂತ ನೀನೆ ಬಲವಂತ ।
ದಿಟ್ಟ ಮೂರುತಿ ಭಳಿ ಭಳಿರೆ ಹನುಮಂತ ।
ಅಟ್ಟಹಾಸದಿಂದಸುರರ ತಲೆಗಳ ಕುಟ್ಟಿ ಚಂಡಾಡಿದೆ ಘಟ್ಟಿರವಂತ ।

ಎಂದು ಹೇಳುತ್ತ "ಲಂಕಾದಹನ" ವನ್ನು ವಿವರಿಸಿ ಕೊನೆಗೆ–

ಶಂಖ ದೈತ್ಯನ ಕೊಂದೆ ಶರಣು ಶರಣ್ಯೆಯ್ಯ ।
ಶಂಖ ಗಿರಿಯಲಿ ನಿಂದೆ ಹನುಮಂತರಾಯ ।

ಪಂಕಜಾಕ್ಷ ಹಯವದನ ಕಟಾಕ್ಷದಿ
ಲಂಕೆಯ ಸುಟ್ಟೆಯೋ ಸೈಸಂಜೀವ ॥ ಎನ್ನುತ್ತಾರೆ–

ಈ ನಮ್ಮ ಸಂಜೀವರಾಯರ ಸ್ಮರಣೆ ಮಾಡಿದರೆ "ಅಂಜಿಕೆಯೇ ಇಲ್ಲ" ಎಂಬುದಾಗಿ ಶ್ರೀ ಪುರಂದರದಾಸರು ಹೀಗೆ ಅಭಯ ಕೊಡುತ್ತಾರೆ.

ಅಂಜಿಕಿನ್ಯಾತಕಯ್ಯಾ । ಸಜ್ಜನರಿಗೆ । ಭಯವು ಇನ್ಯಾತಕಯ್ಯ ।
ಸಂಜೀವರಾಯರ ಸ್ಮರಣೆ ಮಾಡಿದ ಮೇಲೆ ।
ಕನಸಿನಲಿ ಮನಸಿನಲಿ ಕಳವಳವಾಗಿರೆ ।
ಹನುಮನ ನೆನೆದರೆ ಹಾರಿಹೋಗದೆ ಪಾಪ ।
ರೋಮ ರೋಮಕೆ ಕೋಟಿ ಅಂಶವುದುರಿಸಿದ
ಭೀಮಸೇನನ ನೆನೆದರೆ ಬಿಟ್ಟು ಹೋಗದೆ ಪಾಪ ।
ಪುರಂದರವಿಠ್ಠಲನ ಪೂಜೆಯ ಮಾಡುವ ।
ಗುರು ಮಧ್ವರಾಯರ ಸ್ಮರಣೆ ಮಾಡಿದ ಮೇಲೆ ।
ಅಂಜಿಕಿನ್ಯಾತಕಯ್ಯಾ ॥

ಮುಂದೆ ಭೀಮಸೇನ ದೇವರನ್ನು–

ದ್ವಾಪರಾಂತ್ಯದಲಿ ಶ್ರೀಕೃಷ್ಣನಂಘ್ರಿಯ ಭಜಿಸಿ
ಪಾಪಿಮಾಗಧ ಬಕ ಕೀಚಕಾದಿಗಳ
ಕೋಪದಿಂದಲಿ ತರಿದು ಕುರುಕುಲವ ಸವರಿ ಪ್ರ-
ತಾಪದಿಂದ ಮೆರೆದೆ ಖಳರ ನೀ ಮುರಿದೆ ॥

ಎಂದು ಬಣ್ಣಿಸಿ ಮಧ್ವಾಚಾರ್ಯರನ್ನು ಕೆಳಗಿನಂತೆ ಕೊಂಡಾಡುತ್ತಾರೆ.

ಮಾಯಿಗಳು ಹೆಚ್ಚಿ ಮತವೆಲ್ಲ ಸಂಕರವಾಗೆ
ತಾಯಿಯಿಲ್ಲದ ಕರುಗಳಂತೆ ಸುಜನರಿರಲು
ನೀಯವತರಿಸಿ ಮತವೆಲ್ಲ ಉದ್ಧರಿಸಿ ನಾ-
ರಾಯಣನೆ ಮೂಜಗಕೆ ಪರದೈವವೆಂದೊರೆದೆ
ನಿನ್ನ ಮತವೇ ವೇದಶಾಸ್ತ್ರಗಳ ಸಮ್ಮತವು
ನಿನ್ನ ಮತವೇ ಇಹಪರಗಳಿಗೆ ಸಾಧನವು ॥

ಈ ಕಾರಣದಿಂದಲೇ "ಮಧ್ವಮತವು" ಶ್ರೇಷ್ಠವಾದದ್ದೆಂದು ಸಾರಿ–

ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡಿ । ಬಿಟ್ಟು ಕೆಡಬೇಡಿ ।
ಹರಿಸರ್ವೋತ್ತಮನಹುದೆಂಬೋ ಜ್ಞಾನವ ತಾರತಮ್ಯದಿಂದ ।

ತಿಳಿಸೋ ಮಾರ್ಗವ ಬಿಡಬೇಡಿ ಎಂಬುದಾಗಿ ಸಜ್ಜನರಿಗೆ ಎಚ್ಚರಿಕೆ ಕೊಡುತ್ತಾರೆ.

ಇನ್ನೊಂದು ಕಡೆ "ಶ್ರೀ ಮುಖ್ಯಪ್ರಾಣ" ನ ಅವತಾರವಾದ ಈ "ಕೂಸನ್ನು" ಕಂಡಿದ್ದೀರಾ ? ಎಂದು ಕೇಳುವ ಪುರಂದರದಾಸರ ನುಡಿ ಭಾವಪೂರ್ಣವಾಗಿದೆ.

ಕೂಸಿನ ಕಂಡೀರಾ ? ಗುರುಮುಖ್ಯ ಪ್ರಾಣನ ಕಂಡೀರಾ ।
ಬಾಲನ ಕಂಡೀರಾ । ಬಲವಂತನ ಕಂಡೀರಾ ।

ಎಂದು ಕೇಳುತ್ತ ಅವತಾರತ್ರಯಗಳ ವರ್ಣನೆಯನ್ನು ಮಾಡುತ್ತಾರೆ.

ಅಂಜನೆಯುದರದಿ ಪುಟ್ಟಿತು ಕೂಸು ।
ರಾಮನ ಚರಣಕೆ ಎರಗಿತು ಕೂಸು ।
ಸೀತೆಗೆ ಉಂಗುರ ಕೊಟ್ಟಿತು ಕೂಸು ।
ಲಂಕಾಪುರವನೆ ಸುಟ್ಟಿತು ಕೂಸು ।
ಬಂಡಿ ಅನ್ನವನುಂಡಿತು ಕೂಸು ।
ಬಕನ ಪ್ರಾಣವ ಕೊಂದಿತು ಕೂಸು ।
ವಿಷದ ಲಡ್ಡುಗೆ ಮೆದ್ದಿತು ಕೂಸು ।
ಮಡದಿಗೆ ಪುಷ್ಪವ ಕೊಟ್ಟಿತು ಕೂಸು ।
ಮಾಯಾವಾದಿಗಳ ಗೆದ್ದಿತು ಕೂಸು ।
ದ್ವೈತಮತವನುದ್ಧರಿಸಿತು ಕೂಸು ।
ಮಧ್ವರಾಯನೆಂಬ ಪೆಸರಿನ ಕೂಸು ।
ಪುರಂದರವಿಠ್ಠಲನ ಪ್ರೇಮದ ಕೂಸು ।

ಈ ಕೂಸು "ಬಲವಂತ" ವಾದದ್ದು ಎಂಬುದನ್ನು ಇನ್ನೊಂದು ಪದ್ಯದಲ್ಲಿ ಸ್ವಾರಸ್ಯವಾಗಿ ಹಾಡಿದ್ದಾರೆ.

ಎಂಥ ಬಲವಂತನೋ ಕುಂತಿಯ ಸುಜಾತನೋ ।
ಭಾರತಿಗೆ ಕಾಂತನೋ ನಿತ್ಯ ಶ್ರೀಮಂತನೋ ।
ರಾಮಚಂದ್ರನ ಪ್ರಾಣನೋ ಅಸುರ ಹೃದಯ ಬಾಣನೋ ।
ಖಳರ ಗಂಟಲ ಗಾಣನೋ ಜಗದೊಳಗೆ ಪ್ರವೀಣನೋ ।
.................................................................
ಮಧ್ವಶಾಸ್ತ್ರವ ರಚಿಸಿದನೋ ಸದ್ವೈಷ್ಣವರ ಸಲುಹಿದನೋ ।
ಉಡುಪಿಲಿ ಕೃಷ್ಣನ ನಿಲಿಸಿದನೋ ಪುರಂದರವಿಠ್ಠಲನ ದಾಸನೋ ।

ವ್ಯಾಸರಾಯರು ಈ ಮುಖ್ಯ ಪ್ರಾಣದೇವರನ್ನು ಒಂದು ಪದ್ಯದಲ್ಲಿ ಹೀಗೆ ಹೊಗಳಿ ಹಾಡಿದ್ದಾರೆ.

ನೀನೇ ವರಗುರು ಮುಖ್ಯಪ್ರಾಣ ನಿರಂ-
ತರವು ನಂಬಿದೆನೋ ನಿಖಿಳ ಗುಣಪೂರ್ಣ ।

ಜ್ಞಾನ ಚಂದ್ರಿಕೆ ಪೊಳೆಯೆ ಭಕ್ತಿ ವಾರಿಧಿಯುಕ್ಕಿ ।
ಮನ ಚಕೋರವು ವಿಷ್ಣುಪದದಿ ನಲಿಯೇ ।
ದೀನಜನಭಯುವಡಗೆ ತಾಪತ್ರಯುಗಳೋಡೆ ।
ಆನಂದತೀರ್ಥೇಂದು ಶ್ರೀಕೃಷ್ಣತಾಮೆಚ್ಚಿ ।

ಶ್ರೀ ವಾಯುದೇವರ ಮೂರನೆ ಅವತಾರವಾದ ಆನಂದತೀರ್ಥರನ್ನು ಪ್ರಾಣೇಶ ವಿಠ್ಠಲರು–

ಆನಂದತೀರ್ಥರೆಂಬೋ ಅರ್ತಿಯು ಪೆಸರುಳ್ಳ ಗುರುಮಧ್ವಮುನಿರಾಯಹಾ ।
ಏನೆಂಬೆ ನಾ ನಿಮ್ಮ ಚರಣಕ್ಕೆ ಎಣೆಗಾಣೆ ಗುರುಮಧ್ವಮುನಿರಾಯಹಾ ।
.....................................................
ಗುರು ಪ್ರಾಣೇಶ ವಿಠಲಪರನೆಂದು ಡಂಗುರಬ ಗುರುಮಧ್ವಮುನಿರಾಯಹಾ ।
ಸಾರಿ ಸಜ್ಜನರಿಗೆ ಹರಿಯಲೋಕ ತೋರಿಸಿದಿ ಗುರುಮಧ್ವಮುನಿರಾಯಹಾ ॥

ಎನ್ನುತ್ತಾ ಬಹುವಾಗಿ ಕೊಂಡಾಡಿದ್ದಾರೆ.

ಶ್ರೀ ವಿಜಯದಾಸರು ಈ ಮಧ್ವರಾಯರ ಕರುಣ ಪಡೆಯುದವ ಧರೆಯೊಳಗ ಇದ್ದರೇನು ? ಇಲ್ಲದಿದ್ದರೇನು ? ಎಂದು ತಿಳಿಸುತ್ತಾ ಹೀಗೆ ಹೇಳುತ್ತಾರೆ.

ಮಧ್ವರಾಯರ ದಾಸನಾದವನೆ ನಿರ್ದೋಷಿ
ಮಧ್ವರಾಯರ ಬಂಟ ಜಗಕೆ ನೆಂಟ ।
ಮಧ್ವರಮಣ ನಮ್ಮ ವಿಜಯವಿಠಲನಾದ ।
ಮಧ್ವೇಶನಾ ಕರುಣ ಪಡೆದವನೆ ಶರಣ ।

ಹನುಮ, ಭೀಮ, ಮಧ್ವರೇ ನಮ್ಮ ತಾಯಿತಂದೆ ಬಂಧುಬಳಗ ಎಂದು ಹೇಳುವ ಪ್ರಸನ್ನವೆಂಕಟದಾಸರ ನುಡಿ ಭಾವಪರವಶತೆಯಿಂದ ಕೂಡಿದೆ.

ಹನುವಹಾ ನಮ್ಮ ತಾಯಿತಂದೆ ।
ಭೀವಹಾ ನಮ್ಮ ಬಂಧು ಬಳಗಾ ।
ಆನಂದತೀರ್ಥರೇ ನಮ್ಮ ಗತಿಗೋತ್ರರು ॥

ಮುಖ್ಯಪ್ರಾಣದೇವರ ಹೊರತು ಕಾಯುವವರು ಬೇರೆ ಯಾರೂ ಇಲ್ಲ ಈ ಜಗದಲ್ಲಿ ಎನ್ನುತ್ತಾರೆ ಶ್ರೀ ಜಗನ್ನಾಥದಾಸರು.

ಮುಖ್ಯಪ್ರಾಣದೇವ ನೀನಲ್ಲದೆ ಕಾಯ್ವರ ಕಾಣೆ ಲೋಕದೊಳಗೆ -
ವಾಸವ ಕುಲಿಶದಿ ಘಾಸಿಸೆ ಜೀವರ ।
ಶ್ವಾಸ ನಿರೋಧಿಸಿದೆ ।
ಆ ಸಮಯದಿ ಕಮಲಾಸನ ಪೇಳಲು ನೀ ಸಲುಹಿದೆ ಜಗವ ।

ನಂತರ ಶ್ರೀ ಗೋಪಾಲದಾಸರು ಶ್ರೀಹರಿಶರಣರಲ್ಲಿ ಇವರೇ ಅಗ್ರೇಸರರು ಎನ್ನುತ್ತಾರೆ.

ಶರಣು ಹರಿಯ ಶರಣಾಗ್ರೇ-
ಸರನೆ ಹನುಮ ಭೀಮ ಮಧ್ವ
ಗುರುವೆ ನಿಮ್ಮ ಚರಣಕಮಲಕೆರಗಿ ನಮಿಸುವೆ ॥

ಶ್ರೀ ಪುರಂದರದಾಸರು "ವಿಠ್ಠಲ"ನನ್ನು ತೋರುವವರೆಗೆ ನಿನ್ನನ್ನು ಬಿಡಲಾರೆ ಎನ್ನುತ್ತಾರೆ.

ಬಿಡುವೇನೇನಯ್ಯಾ ಹನುಮಹಾ ಬಿಡುವೇನೇನಯ್ಯಾ ।
ಬಿಡುವೇನೇನೋ ಹನುಮಹಾ ನಿನ್ನ ಅಡಿಗಡಿಗೆ ಶಿರವ ಬಾಗಿ
ದೃಢಭಕುತಿ ಸುಜ್ಞಾನವನ್ನು ತಡಮಾಡದಲೇ ನೀ ಕೊಡುವ ತನಕ ।
..................................................
ಹಲ್ಲುಮುಡಿಯ ಕಚ್ಚಿದರೇನು । ಗುಲ್ಲುಮಾಡಿದರಂಜುವನಲ್ಲ ।
ಫುಲ್ಲನಾಭ ಶ್ರೀ ಪುರಂದರವಿಠಲನ । ಇಲ್ಲಿಗೆ ತಂದು ತೋರುವ ತನಕ ।
ಬಿಡುವೇನೇನಯ್ಯಾ ಹನುಮಹಾ । ಬಿಡುವೇನೇನಯ್ಯಾ ॥

ಶ್ರೀ ವಾದಿರಾಜರು ಅವತಾರತ್ರಯ ವಾಯುದೇವರಿಗೆ "ಲಾಲಿ" ಹೇಳುವದು ಅಂದವಾಗಿದೆ.

ಲಾಲಿ ಹನುಮಹಾ ಭೀಮ ಮಧ್ವಮುನಿರಾಯಹಾ ।
ಲಾಲಿ ರಾಮಹಾ ಕೃಷ್ಣವ್ಯಾಸರ ಪ್ರಿಯಹಾ ।
ಮೂಜಗದಲಿ ನೀ ಮೆರೆದ ಬ್ರಹ್ಮಚಾರಿ ।
ಈ ಜಗದಲಿ ಕಪಿರಾಜ್ಯವ ತೋರಿ ।
ತೇಜ ಮುತ್ತಿನ ಕವಚ ಕುಂಡಲಧಾರಿ ।
ಪೂಜಿಪರ ಪಾಲಿಪೆ ಸುಜನರುಪಕಾರಿ । ಲಾಲಿ ।

ಭೂಮಿಭಾರವ ನಿಳುಹೆ ಬಂದೆ ಕಲಿಭೀಮ ।
ಕಾಮಿಕೀಚಕನನ್ನು ಕುಟ್ಟಿರಣಧಾಮ ।
ಭಾಮಿನಿ ದ್ರೌಪದಿ ಕಷ್ಟ ನಿರ್ಧೂಮ ।
ಕಾಮಿತಾರ್ಥಗಳಿತ್ತು ಸಲಹು ನಿಸ್ಸೀಮ ॥ ಲಾಲಿ ॥

ಸುಂದರ ರೂಪದ ಶ್ರೀ ಮಧ್ವಾನಂದ ।
ತಂದೆ ಹಯವದನನ ಮೋಹದ ಕಂದ ।
ಬಂದು ಉಡುಪಿಯಲ್ಲಿ ನೆಲೆಯಾಗಿ ನಿಂದ ।
ವಂದಿಸುವೆ ನಿದ್ರೆಗೈ ಹರಿಧ್ಯಾನದಿಂದ ॥ ಲಾಲಿ ॥

ನಿದ್ರೆಗೈಯುತ್ತಿರುವ ವಾಯುದೇವರನ್ನು ಭೂಪಾಳಿ ರಾಗದಿಂದ ಎಬ್ಬಿಸುವಾಗಲೂ ಅವತಾರತ್ರಯ ವರ್ಣನೆಯೇ ಶ್ರೀ ಪುರಂದರದಾಸರಿಗೆ ಅಚ್ಚುಮೆಚ್ಚು.

ಏಳು ಹನುಮಂತ ಎಷ್ಟು ನಿದ್ರೆ ।
ಮಾತನಾಡಲು ಬೇಕು । ಮುದ್ರಿಕೆ ತರಲು ಬೇಕು ॥

ಹರಿಕುಶಲವ ಜಾನಕಿಗೆ ತಿಳಿಸಬೇಕು । ವನವ ಕೀಳಲು ಬೇಕು ।
ಚೂಡಾಮಣಿಯ ತರಲು ಬೇಕು । ಹರಿ ।
ಹರುಷದಿಂದಲಿ ಖ್ಯಾತಿಯ ಪಡೆಯಬೇಕು ।

ಕುರುಕುಲದಲಿ ಕುಂತಿಸುತನಾಗಿ ಜನಿಸಲು ಬೇಕು ।
ರಣದಲಿ ಕೌರವರ ಗೆಲಿಯಬೇಕು ।
ವನದೊಳಗೆ ಘನತೃಷೆಯು ಗಾಸಿಪಡಿಸಲು ಬೇಕು ।
ಮಡದಿಗೆ ಸೌಗಂಧಿಕವ ತರಲು ಬೇಕು ।

ಯತಿಯಾಗಿ ಬರಬೇಕು । ಕುಮತವ ಖಂಡಿಸಬೇಕು ।
ಅದ್ವೈತವಾದಿಗಳ ಗೆಲಿಯಬೇಕು ।
ಮಧ್ವಶಾಸ್ತ್ರವ ಲೋಕಕೆ ನಿರ್ಣಯ ಮಾಡಲು ಬೇಕು ।
ಮುದ್ದು ಪುರಂದರವಿಠಲನ ದಾಸನೆಂದೆನಿಸಬೇಕು ॥

ಹೀಗೆ ಪ್ರತಿ ಸಂದರ್ಭದಲ್ಲೂ ಶ್ರೀ ವಾಯುದೇವರ ಅವತಾರತ್ರಯ ರೂಪರಾದ ಶ್ರೀ ಹನುಮ, ಭೀಮ, ಮಧ್ವರನ್ನು ನಮ್ಮ ಹರಿದಾಸರು ತಮ್ಮ ಪದ್ಯಗಳಲ್ಲಿ ಮನವಾರೆ ಕೊಂಡಾಡಿ ದಾಸಸಾಹಿತ್ಯದ ಮೇಲ್ಮೆಯನ್ನು ಊರ್ಜಿತಗೊಳಿಸಿರುವುದರಲ್ಲಿ ಸಂದೇಹವಿಲ್ಲ.

**ಶ್ರೀ ಮಧ್ವೇಶಾರ್ಪಣಮಸ್ತು**

# ಶ್ರೀಮನ್ ಮಧ್ವಮತ

ನಮ್ಮ ಹರಿದಾಸರು ಮಾಧ್ವಮತದ ಅಚ್ಚುಕಟ್ಟಿಗೆ ಸೇರಿದವರೆಂದು ಹೇಳಿದರೆ ತಪ್ಪಾಗದು. ಅವರು ಮಧ್ವಮತದ ಅನೇಕ ಪ್ರಮೇಯಗಳನ್ನು ಘಂಟಾಘೋಷವಾಗಿ ಎತ್ತಿ ಸಾರಿದ್ದಾರೆ. ಶ್ರೀ ವಿಷ್ಣುವೇ ಸರ್ವೋತ್ತಮನೆಂದು ಹೇಳುವುದರ ಜೊತೆಗೆ ಜಗತ್‌ಸತ್ಯತ್ವ, ತಾರತಮ್ಯ, ಪಂಚಭೇದಗಳು ಮಧ್ವಶಾಸ್ತ್ರವೇ ಮೋಕ್ಷದಾಯಕವೆಂಬ ಅಂಶಗಳನ್ನು ತಮ್ಮ ಕೃತಿಗಳಲ್ಲಿ ಚನ್ನಾಗಿ ಹಣೆದು ಶ್ರೀ ಸಾಮಾನ್ಯರೆಲ್ಲರಿಗೆ ತಿಳಿಸಿಕೊಟ್ಟು ಮಹೋಪಕಾರ ಮಾಡಿದ್ದಾರೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.

ಮೊದಲನೆಯದಾಗಿ ಶ್ರೀ ವಾದಿರಾಜರು ಈ ಮಧ್ವಮತವು ಸರಿಸಾಟಿಯಿಲ್ಲದ್ದು ಎಂದಾಗಿ ಶಪಥಮಾಡಿ ಹೇಳುತ್ತಾರೆ.

ಶ್ರೀಮಧ್ವಶಾಸ್ತ್ರವೇ ಸಕಲಶಾಸ್ತ್ರಧಿಕೆಂದು ಶ್ರೀ ತುಲಸಿಯ ಪಿಡಿಯಲಾ ?
ವಿದಿತ ದೈವಗಳೊಳಗೆ ವಿಷ್ಣು ಉತ್ತಮನೆಂದು ವೇದಗಳ ಒಡನುಡಿಸಲಾ ?
ಪರಲೋಕ ಸಾಧನಕೆ ತಾರತಮ್ಯಮತವೆಂದು ಕರಾಳ ವಿಷವನು ಕುಡಿಯಲಾ ?
ಗುರುಮಧ್ವರಾಯರೇ ಆತ್ಮರಕ್ಷಕರೆಂದು ಅನಲವನು ನಾ ಪಿಡಿಯಲಾ?
ಸಿರಿ ಹಯವದನನೇ ಅಮಿತಗುಣಪೂರ್ಣನೆಂದು ಅಶರೀರವನು
ನುಡಿಸಲಾ ? ಮನುಜಾ.

ಇದು ಅವರ "ಮಧ್ವಮತ ದೀಕ್ಷೆ" ಎಷ್ಟು ಉಚ್ಚಮಟ್ಟದ್ದೆಂದೂ ತಿಳಿಸುತ್ತದೆ.

ಶ್ರೀ ವ್ಯಾಸರಾಯರು "ಜನುಮ ಜನುಮದಲ್ಲಿ ಕೊಡು ಕಂಡ್ಯ ಹರಿಯೇ" ಎಂಬ ಪದ್ಯದಲ್ಲಿ–

ಹರಿಯೇ ಸರ್ವೋತ್ತಮ ರಾಣಿ ಲಕುಮಿಬೊಮ್ಮ ।
ಹರ ಇಂದ್ರಾದ್ಯಖಿಳರು ತವ ಸೇವಕರು ।
ವರ ತಾರತಮ್ಯ ಪಂಚಭೇದ ಸತ್ಯವೆಂದು ।
ನೆರೆ ಪೇಳುವ ವಾಯುಮತದ ಸುಜ್ಞಾನವ । ಕೊಡು
ಮತ್ತು ಸಕಲ ವಿಬುಧೋತ್ತಮರಲ್ಲಿ ನಮ್ರತೆಯು ।
ಸುಖತೀರ್ಥರಲಿ ಮುಖ್ಯ ಗುರುಭಾವನೆಯು ।

ಮುಕುತಿ ಪ್ರದಾಯಕ ಸಿರಿ ಕೃಷ್ಣ ನಿನ್ನಲ್ಲಿ ।
ಅಕಳಂಕವಾದ ನವವಿಧ ಭಕುತಿಯನು । ಕೊಡು–

ಎಂಬುದಾಗಿ ಶ್ರೀ ಹರಿಯನ್ನು ಪ್ರಾರ್ಥಿಸುತ್ತ ತತ್ವಗಳ ಬೋಧನೆಯನ್ನು ಕೂಡ ಮಾಡಿದ್ದಾರೆ.

ಶ್ರೀ ಶ್ರೀಪಾದರಾಯರು "ಮಾರುದಂಶನ ಮತ ಪಿಡಿಯದೆ ಇಹಪರಗಳಲ್ಲಿ ಸುಖವಿಲ್ಲವಂತೆ" ಎಂದು ಹೇಳುತ್ತ–

ಸಾರಮಧ್ವಶಾಸ್ತ್ರ ಓದದೆ ಎಂದೂ ।
ತಾರತಮ್ಯಜ್ಞಾನ ಪುಟ್ಟದಂತೆ–
ಶ್ರೀರಂಗವಿಠಲನ ಭಜಿಸದೆ ಮುಂದಿನ್ನು ।
ಚಾರು ಸದ್ಗತಿಗಳು ದೊರೆಯವಂತೆ ॥

ಎಂಬುದಾಗಿ ತಿಳಿಸಿದ್ದಾರೆ.

ಶ್ರೀ ಪುರಂದರದಾಸರು "ವಿಧಾತ್ರದೇವತೆಗಳೆಲ್ಲ ವಿಷ್ಣುವಿನ ಹಿಂದೆ" ಎಂಬುದಾಗಿ ಹೇಳಿ" ಮತಗಳೆಲ್ಲವು ಮಧ್ವಮತಸುಸಾರದ ಹಿಂದೆ" ಎನ್ನುತ್ತಾರೆ. ಈ ಕಾರಣಕ್ಕಾಗಿಯೇ,

ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡಿ–
ಬಿಟ್ಟು ಕೆಡಬೇಡಿ ।
ಹರಿ ಸರ್ವೋತ್ತಮನಹುದೆಂಬ ಜ್ಞಾನವ
ತಾರತಮ್ಯದಿಂದ ತಿಳಿಸೋ ಮಾರ್ಗವ ಬಿಡಬೇಡಿ ॥ ಬಿಟ್ಟು ಕೆಡಬೇಡಿ ॥

ಎಂದು ತಿಳಿಸಿ ಎಚ್ಚರಿಕೆ ನೀಡಿದ್ದಾರೆ.

ಶ್ರೀ ವಿಜಯದಾಸರು "ಮಧ್ವಮತವ ಪೊಂದದವನ ಭಕುತಿಯಾತಕೆ ? ಎಂದು ಹೇಳಿ ಮುಂದೆ–

ಮಧ್ವಮತವೇ ಮತವು ಸಕಲ ಶ್ರುತಿ ಸಮ್ಮತವು ।
ಮಧ್ವರಾಯರ ಧ್ಯಾನ ಅಮೃತ ಪಾನ ।
ಮಧ್ವರಾಯರ ಲೀಲೆ ನವರತುನದಾ ಮಾಲೆ ।
ಮಧ್ವೇಶನಾ ಸ್ಮರಣೆ ಕುಲಕೋಟಿ ಉದ್ಧರಣೆ ॥

ಎಂಬ ಮಾತನ್ನು ಘಂಟಾಘೋಷವಾಗಿ ಹೇಳಿದ್ದಾರೆ.

ಶ್ರೀ ಜಗನ್ನಾಥದಾಸರು "ತತ್ವಸುವ್ವಾಲಿ" ಯ ಪದ್ಯವೊಂದರಲ್ಲಿ–

ಮತದೊಳಗೆ ಮಧ್ವಮತವೆನ್ನಿ ।
ವ್ರತದೊಳಗೆ ಹರಿದಿನ ।

ಕಥೆಯೊಳಗೆ ಭಾಗವತ ಕಥೆಯೆನ್ನಿ ॥
ಕಥೆಯೆನ್ನಿ ಮೂಲೋಕದೊಳಗೆ ಶ್ರೀಕೃಷ್ಣಪ್ರತಿಮೆನ್ನಿ । ಎಂದಿದ್ದಾರೆ.

ಇನ್ನು ಈ ಮಧ್ವಮತಕ್ಕೆ ಇಷ್ಟೊಂದು ಪ್ರಾಶಸ್ತ್ಯವೇಕೆ ? ಎಂದಾಗ–
ಶ್ರೀ ಪುರಂದರದಾಸರು–

ಸರಸ ಸದ್ಗುಣ ಸಾತ್ವಿಕವೀ ಮತವು ।
ಇದು ಶುದ್ಧ ಸಾತ್ವಿಕ ಮತವು ।
ಪರಮತ ಖಂಡಿಸಿ ಪಂಡಿತರು ಹೇಳಿದ ।
ಪುರಂದರವಿಠಲನ ಮತವೇ ಪಂಡಿತರ ಮತವು ॥ ಎನ್ನುತ್ತಾರೆ.

ಇದರಿಂದ ಶ್ರೀಮನ್ ಮಧ್ವಮತವು ಸಾಧಕರಿಗೆ ಅನುಕೂಲವಾದುದೆಂದೂ, ಪರಮ ಭಾಗವತರುಗಳಾದ ಸನಕಾದಿ ಮುನಿಶ್ರೇಷ್ಠರುಗಳಿಗೆ ಸಮ್ಮತವಾದುದೆಂದೂ, ಇದೇ ಭಗವಂತನ ಮತವೆಂದೂ ತಿಳಿದುಬರುತ್ತದೆ.

ಆದ್ದರಿಂದಲೇ "ಶ್ರೀ ಹರಿಸರ್ವೋತ್ತಮನೆಂದು ಸ್ಮರಿಸದ ಜನರ ಸಂಗ ಬೇಡ, ಸಿರಿವಾಯು ಮತಪೊಂದಿ ಹರುಷಪಡದವರ ಸಂಗ ಬೇಡ" ಎಂಬುದಾಗಿ ನಮ್ಮ ಹರಿದಾಸರು ಸಾರಿ ಹೇಳಿ ಸಜ್ಜನರುಗಳಿಗೆಲ್ಲ ಉಪದೇಶಿಸಿ ಉದ್ಧರಿಸಿದ್ದಾರೆ.

ಶ್ರೀ ಮಧ್ವೇಶಾರ್ಪಣಮಸ್ತು

## ಶ್ರೀಮಜ್ಜಯತೀರ್ಥರು (ಟೀಕಾರಾಯರು)

ಸರ್ವಜ್ಞಕಲ್ಪರಾದ. ಶ್ರೀಮನ್ನ್ಯಾಯ ಸುಧಾದಿ ಗ್ರಂಥಗಳನ್ನು ರಚಿಸಿ, ಟೀಕಾ ಚಾರ್ಯರೆಂದು ಪ್ರಸಿದ್ಧಿ ಪಡೆದು ಮಳಖೇಡ ಕ್ಷೇತ್ರದಲ್ಲಿ ವಿರಾಜಮಾನರಾಗಿರುವ-"ಶ್ರೀಮಜ್ಜಯತೀರ್ಥ" ಯತಿವರೇಣ್ಯರನ್ನು ನಮ್ಮ ಅನೇಕ ಯತಿಗಳು, ದಾಸರು ಮುಕ್ತಕಂಠದಿಂದ ಹೊಗಳಿ ಹಾಡಿದ್ದಾರೆ. ಅವರವರ ವಾಣಿಯಿಂದಲೇ ಶ್ರೀಮಜ್ಜಯ ತೀರ್ಥರ ಹಿರಿಮೆಯನ್ನು ಇಲ್ಲಿ ಕಾಣಬಹುದು.

ಶ್ರೀಮಜ್ಜಯತೀರ್ಥರ ಪೂರ್ವವೃತ್ತಾಂತ, ಅವತಾರ ಕಥನವನ್ನು ಶ್ರೀ ವ್ಯಾಸವಿಠ್ಠಲರು ಕೆಳಗಿನಂತೆ ವಿವರಿಸಿದ್ದಾರೆ.

ಅತ್ಯಂತ್ವರುಷದಿ ಎತ್ತಾಗಿರುತಿರಲು ।
ಆನಂದತೀರ್ಥರು ನಿತ್ಯಪಠಿಸುವ ಪುಸ್ತಕ ಹೊರುತಿರಲು ।
ಗುರುರಾಯರು ಪೇಳಿದ । ತತ್ವಗ್ರಂಥವನೆ ಕಿವಿಯಲಿ ಕೇಳುತಲಿ ।
ತಲೆಯ ತೂಗುತಲಿ । ಮತ್ತೆ ಪುಟ್ಟಿದ್ಯೋ
ಮಂಗಳವೇಢೆಯಲಿ । ಅತಿಮತಿವಂತರಲಿ ॥

ಶ್ರೀ ಪ್ರಸನ್ನ ವೆಂಕಟದಾಸರು ಇವರು ತುರ್ಯಾಶ್ರಮವನ್ನು ಪಡೆದ ವಿಷಯ ವನ್ನು ಹೀಗೆ ತಿಳಿಸುತ್ತಾರೆ.

ಈ ಕ್ಷೋಣಿಯೋಳ್ ಪ್ರತಿವರ್ಜಿತನೆ ।
ಶ್ರೀ ಅಕ್ಷಯಪ್ರಜ್ಞ ಕೃಪಾನ್ವಿತನೆ ಗುರು
ಅಕ್ಷೋಭ್ಯತೀರ್ಥರ ತನಯನೆಂದೆನಿಸಿದೆ । ವಿಶ್ವ
ಕುಕ್ಷಿಪ್ರಸನ್ನ ವೆಂಕಟಪ್ರಿಯ ಜಯಮುನಿ ॥

ಇವರು ದೇವಾಂಶ ಸಂಭೂತರೆಂಬುದನ್ನು ಶ್ರೀಜಗನ್ನಾಥದಾಸರು ಹೀಗೆ ತಿಳಿಸುತ್ತಾರೆ.

ಸುರನಾಥನೆ ನೀ ನರನಾವೇಶದಿ
ಧರಣಿಯೊಳಗೆ ಅವತರಿಸಿದೆ ದಯದಿ ॥

ದಾಸವರ ಶ್ರೀ ವಿಜಯದಾಸರು ಇವರ ಅತಿಶಯವಾದ ವಿರಕ್ತಿಯನ್ನು ಹೀಗೆ ಬಣ್ಣಿಸಿದ್ದಾರೆ.

ಕಾಮಗೆದ್ದರಾ ಹರಿಗೆ ಪ್ರೇಮಪೂರ್ಣರಾ ।
ನೇಮ ನಿತ್ಯರಾ । ನಿಷ್ಕಾಮನಾಪರ ।

ಶ್ರೀ ವಾದಿರಾಜ ಗುರುಸಾರ್ವಭೌಮರು ಪರಮಾತ್ಮನ ಪಾದಕಮಲಗಳಲ್ಲಿ ಭೃಂಗಾಯಮಾನರಾದ ಶ್ರೀಮಜ್ಜಯತೀರ್ಥರನ್ನು ಕೊಂಡಾಡಿದ ರೀತಿ ಹೀಗಿದೆ :

ಬರಿಯ ಮಾತುಗಳಿಂದ ಬಂದವಿದ್ಯಾರಣ್ಯನ ।
ಮರುಳು ಮಾಡಿದ ಗ್ರಂಥ ಕರುಣದಿಂದ ।
ನರರ ಕುರಿಗಳ ಮಾಡಿದಾಶ್ಚರ್ಯ ಕಾರಣ ಪುರುಷ ।
ಹಯವದನ ಪದ ಸರಸಿಜ ಭ್ರಮರ ॥

ಹಾಗೂ ಮಲ್ಲರಾದ ಮಾಯಿಗಳ ಹಲ್ಲು ಮುರಿದು ।

ವಲ್ಲಭ ಜಗಕೆ ಶ್ರೀ ನಲ್ಲನೆಂದರುಹಿದ ॥ ಜಯರಾಯ

ಎಂಬುದಾಗಿ ಕೊಂಡಾಡಿದ್ದಾರೆ.

ಇವರು ಶ್ರೀಮದಾನಂದತೀರ್ಥ ಭಗವತ್ಪಾದರ ಗ್ರಂಥಗಳಿಗೆ ಟೀಕೆಗಳನ್ನು ವಿರಚಿಸಿ ದ್ವೈತಸಿದ್ಧಾಂತಕ್ಕೆ ಮಹದುಪಕಾರ ಮಾಡಿದ ಮಹಾಮಹಿಮರೆಂಬುದನ್ನು ಶ್ರೀ ವ್ಯಾಸರಾಯರು ಕೆಳಗಿನಂತೆ ತಿಳಿಸಿದ್ದಾರೆ.

ವ್ಯಾಸಸೂತ್ರಗಳೆಂಬ ಮಂದರವನು ।
ವೇದರಾಶಿಗಳೆಂಬ ಕ್ಷೀರವಾರಿಧಿಯೊಳಿಟ್ಟು ।
ಶ್ರೀ ಸರ್ವಜ್ಞವಾಕ್‌ಪಾಶದಿ ಸುತ್ತಿ ।
ಭಾಸುರ ನ್ಯಾಯ ಸುಧೆಯ ಪಡೆದ್ಯೋಯತೀಂದ್ರ ॥

ಇವರ ಸ್ಥಾನವನ್ನು ಶ್ರೀ ವರದೇಶವಿಠ್ಠಲರು ಹೀಗೆ ವರ್ಣಿಸಿದ್ದಾರೆ.

ಯತಿಕುಲಮುಕುಟ ಶ್ರೀ ಜಯತೀರ್ಥ ।
ಸದ್ಗುಣಭರಿತ ಅತಿ ಸದ್‌ಭಕುತಿಲಿ ನುತಿಪ ಜನರ ।
ಸಂತತ ಪಾಲಿಸುತಲಿ ಪೃಥಿವಿಲಿ ಮೆರೆವ ॥

ಇಂಥ ಗುರುಗಳನ್ನು ಸೇವಿಸಿದಲ್ಲಿ ಸುಖ ಸಂಪದ ಪ್ರಾಪ್ತಿಯಾಗುವದು ನಿಶ್ಚಿತವೆಂಬು ವನ್ನು ಶ್ರೀಪತಿವಿಠಲರು ತಿಳಿಸುತ್ತಾರೆ.

ವೃಂದಾವನ ಸಂದರುಶನ ಮಾತ್ರದಲಿ ।
ಭವಭಯ ದೂರದಲೆ ನಿಂದಿರದಲೆ ಬಿಟ್ಟೋಡುವವು ।
ನಿರುತಾ ಸುಖ ಸಂಪದವನ್ನು ಕುಂದದೇ ಕೊಡುವರು ।
ಈ ನುಡಿ ಪುಸಿಯಲ್ಲ. ಕೇಳಿನ್ನ ಸೊಲ್ಲಾ ।
ಇಂದಿರೇಶನ ಸನ್ನಿಧಾನ ಪಾತ್ರಾ ।
ಅತಿ ಚಿತ್ರ ವಿಚಿತ್ರ ॥

ಕೊನೆಯಲ್ಲಿ ಶ್ರೀಮಜ್ಜಯತೀರ್ಥ ಗುರುವರರಿಗೆ ಮಂಗಳ ಪಾಡೋಣ.

ನಾಕಾಧಿಪನೆಂದೆನಿಸಿದಗೆ ।
ಕಾಕಿನಿ ತೀರದಿ ನಿಂದವಗೆ ।
ಶ್ರೀಕರ ಭಾಷ್ಯಕೆ ಟೀಕೆಯ ರಚಿಸಿದ ।
ಲೋಕೋದ್ಧಾರಕ ಗುರುವರಗೆ
ಮಂಗಳಂ ಜಯ ಮಂಗಳಂ ॥

ಶ್ರೀ ಮಧ್ವೇಶಾರ್ಪಣಮಸ್ತು

# ಶ್ರೀಗುರು ರಾಘವೇಂದ್ರರು

ಶ್ರೀಮಧ್ವಮತವರ್ಧನರೆನಿಸಿದ, ಅಪರೋಕ್ಷೀಕೃತಶ್ರೀಶರಾದ ಶ್ರೀ ರಾಘವೇಂದ್ರರನ್ನು ಹರಿದಾಸರು ಮನವಾರೆ ಸ್ತುತಿಸಿ ಹಾಡಿದ್ದಾರೆ. ಅವರವರ ವಾಣಿಯಿಂದ ಶ್ರೀ ರಾಘವೇಂದ್ರರ ಹಿರಿಮೆಯನ್ನು ಇಲ್ಲಿ ಕಾಣಬಹುದು.

ಶ್ರೀ ರಾಘವೇಂದ್ರರ ಪೂರ್ವ ಅವತಾರಗಳನ್ನು ಶ್ರೀ ಗೋಪಾಲದಾಸರು ಹೀಗೆ ವರ್ಣಿಸುತ್ತಾರೆ.

ಪ್ರಥಮ ಪ್ರಹ್ಲಾದ ವ್ಯಾಸಮುನಿಯೇ ಯತಿ ರಾಘವೇಂದ್ರ ।
ಪ್ರತಿವಾದಿ ಕದಳೀವನಕರಿಯೇ ಕರಮುಗಿವೆನು ದೊರೆಯೇ ।
ಕ್ಷಿತಿಯೊಳು ಗೋಪಾಲವಿಠ್ಠಲನ ತುತಿಸುತ ।
ಪ್ರತಿ ಮಂತ್ರಾಲಯದೊಳು ಅತಿ ಮೆರೆವ ॥

ಶ್ರೀ ವ್ಯಾಸರಾಯರೇ ಶ್ರೀ ರಾಘವೇಂದ್ರರಾಗಿ ಅವತರಿಸಿರುವರೆಂದು ಶ್ರೀ ಕನಕಾದ್ರಿವಿಠ್ಠಲರು ತಿಳಿಸುತ್ತಾರೆ.

ಒಂದು ಯುಗದಲ್ಲಿ ನಾರಸಿಂಹ ಗಿರಿಯಲ್ಲಿ
ಬಂದು ಪೋಗುತಿರಲು ನಾರದ ಮುನಿಗಾಗ
ವಂದಿಸಿ ಕೇಳಿದನು ಪ್ರಹ್ಲಾದ ಹರಿಚರ್ಯ
ಮುಂದೆ ಮಾಡುವದೆಲ್ಲ ಮಾತಾಡಿ ಇಬ್ಬರು ।
ಬಂದುದಿಸಿದರು ಉತ್ತರ ದಕ್ಷಿಣದಿ ।
ಅಂದಿನ ಕುರುಹುಗಳು ತಿಳಿದು ಪೂರ್ಣ ಆನೆ ।
ಗುಂದಿ ಸ್ಥಳವ ಆಳ್ದ ವ್ಯಾಸರಾಯರೇ ರಾಘ ।
ವೇಂದ್ರ ಗುರುಸಾರ್ವಭೌಮರೆಂಬೋ ನಾಮದಲಿ ।
ತಂದೆ ಶ್ರೀ ಕನಕಾದ್ರಿವಿಠ್ಠಲನ ಚರಣಾಬ್ಜ ।
ದ್ವಂದ್ವಗಳ ಕರುಣಕೆ ಪಾತ್ರರಾಗಿ ಬಾಳಿದರು ॥

ಇವರು ತುರ್ಯಾಶ್ರಮವನ್ನು (ಶ್ರೀ ಸುಧೀಂದ್ರತೀರ್ಥರಿಂದ) ಪಡೆದ ವಿಷಯವನ್ನು ಶ್ರೀ ಜಗನ್ನಾಥದಾಸರು ತಿಳಿಸಿದ್ದಾರೆ.

ವ್ಯಾಸರಾಯನೆನಿಸಿ ನೃಪನ । ಕ್ಲೇಶ ಕಳೆದವನೇ ಬಾರೋ ।
ಶ್ರೀ ಸುಧೀಂದ್ರಕರಸಂಜಾತ । ವಾಸುದೇವಾರ್ಚಕನೇ ಬಾರೋ ॥

ಇವರಿಗೆ "ಶ್ರೀ ರಾಘವೇಂದ್ರ" ಎಂಬ ಹೆಸರು ಸಾರ್ಥಕನಾಮವಾಗಿದೆಯೆಂದು-ಶ್ರೀ ಗೋಪಾಲದಾಸರು ತಿಳಿಸಿದ್ದಾರೆ.

'ರಾ' ಎನಲು ರಾಶಿದೋಷಗಳೆಲ್ಲ ದಹಿಸುವ ।
'ಘ' ಎನಲು ಘನಜ್ಞಾನ ಭಕುತಿ ಈವ ।
'ವೇಂ' ಎನಲು ವೇಗದಿ ಜನನ ಮರಣ ದೂರ ।
'ದ್ರ' ಎನಲು ದ್ರವಿಣಾರ್ಥಶ್ರುತಿ ಪ್ರತಿಪಾದ್ಯನ ಕಾಂಬ ॥

ಇವರ ಅಸದೃಶವಾದ ಕಾಂತಿಯನ್ನು ಶ್ರೀ ಕಮಲೇಶದಾಸರು ಹೀಗೆ ತಿಳಿಸುತ್ತಾರೆ.

ಶರಣರ ಸುರಭೋಜಾ । ಗುರುರಾಜಾ ।
ವರ । ಮಂತ್ರಾಲಯ ಪುರ ಮಂದಿರ ಸುಂ ।
ದರ ಮುನೀಂದ್ರ ಭಾಸ್ಕರ ಸಮತೇಜ ॥

ಇನ್ನು, ಇವರ ವಾದಿ ನಿಗ್ರಹವನ್ನು ಶ್ರೀ ಕದರಮಂಡಲಗಿದಾಸರು ವರ್ಣಿಸುವದು ಸುಂದರವಾಗಿದೆ.

ಹೇಯ ಮತಗಳೆಲ್ಲವ ಮುರಿದು । ಬಲು
ಬಾಯಿ ಬಾರದೆ ನಿಲ್ಲಲು ಜರಿದ ।
ವಾಯಿ ಚೋರರು ಪಲಾಯನ ಗೈಯಲು ।
ನ್ಯಾಯಾಮೃತಮಯ ವೃಷ್ಟಿಕರೆಸಿದಾ ॥

ಇವರು ಶ್ರೀರಾಮ ಪಾದಕಮಲದಲ್ಲಿ ಭೃಂಗಾಯಮಾನರೆಂಬುದನ್ನು ಶ್ರೀರಾಮಚಂದ್ರ ವಿಠ್ಠಲರು ಹೀಗೆ ಬಣ್ಣಿಸುತ್ತಾರೆ.

ನಾ ಬೇಡಿಕೊಂಬೆನು । ಪ್ರೇಮದಿ ಕೊಡು ಎನಗೆ ನೀ ವರವಾ ।
ಧೀಮಂತನೇ ದಯವಂತನೇ ಶ್ರೀ । ರಾಮಪದ ಸರಸಿಜಕೆ ಭೃಂಗಾ ॥

ಇವರ ಚರಣ ಸೇವಕರ ಸೇವಾ, ದರುಶನದಿಂದ ಪಾಪರಾಶಿಗಳೆಲ್ಲ ದೂರವೆಂದು ಶ್ರೀ ರಘುನಾಥ ವಿಠ್ಠಲರು ತಿಳಿಸಿದ್ದಾರೆ.

ದರುಶನವೆ ಘನದುರಿತವನ ದಹನ । ಗುರುರಾಘವೇಂದ್ರರ ಚರಣ
ಸೇವಕರ ಪರಮಭಕುತಿ ಪುರಸ್ಕಾರದೊಳಿವರ ಪದ । ಸರಸಿಜಧೂಳಿಯ
ಧರಿಸಿದವರ । ಸಂದರುಶನವೇ ಘನದುರಿತವನ ದಹನ ॥

"ಪರಿಮಳ" ಗ್ರಂಥಕರ್ತೃಗಳಾದ ಇವರನ್ನು ಶ್ರೀ ಮೋಹನದಾಸರು ಹೀಗೆ ಬಣ್ಣಿಸಿದ್ದಾರೆ.

ಕಂಡು ಧನ್ಯನಾದೆ । ಗುರುವರ ಸುಗುಣೇಂದ್ರರಿಂದ ಪರಿಪರಿ ಸೇವೆಗೊಳುತ !
ವರ ಮಂತ್ರಾಲಯ ಪುರದಿ ಮೆರೆವ । ಪರಿಮಳಾಖ್ಯ ಗ್ರಂಥಕರ್ತರ ।
ಕಂಡು ಧನ್ಯನಾದೆ ॥

ಇವರ ಸೇವೆಯಿಂದ ಸಕಲಾಭೀಷ್ಟಗಳು ಪೂರೈಸುವವೆಂಬುದನ್ನು ಶ್ರೀಶ ವಿಠ್ಠಲರು ಹೀಗೆ ತಿಳಿಸಿದ್ದಾರೆ.

ನೋಡು ಹೇ ಮನವೆ ಕೊಂಡಾಡು ಗುರುಗಳ ಪಾದ ಈಡು ಇಲ್ಲವೋ ಪುಣ್ಯಕೆ ।
ನಾಡೊಳಗೆ ಗುರುರಾಘವೇಂದ್ರರ ಸೇವೆ ಮಾಡುವವ ಪರಮ ಧನ್ಯ ॥ ಸನ್ಮಾನ್ಯ ॥
ನಿಷ್ಠೆಯಿಂದನುಸರಿಸೆ ಕಷ್ಟಗಳು ದೂರ ಮನೋಭೀಷ್ಟಗಳ ಪೂರೈಪರು ।
ಅಷ್ಟ ಸೌಭಾಗ್ಯಗಳ ಕೊಟ್ಟು ಸುಜನರಿಗೆ ಶ್ರೀ ವಿಷ್ಣುದಾಸ್ಯವ ಸಲಿಪರು ॥

ವೃಂದಾವನದಲ್ಲಿ ಸನ್ನಿಹಿತರಾಗಿದ್ದು ಭಕ್ತರನ್ನು ಪೊರೆಯುತ್ತಾರೆಂಬುದನ್ನು ಶ್ರೀ ಅಭಿನವ ಜನಾರ್ದನ ವಿಠ್ಠಲರು ತಿಳಿಸಿಕೊಡುತ್ತಾರೆ.

ವೃಂದಾವನದೊಳಗಿರುವ । ಭೂ । ವೃಂದಾರಕನು ಪೊರೆವಾ ।
ವೃಂದ ಗುಣಗಳಿಂ ಮೆರೆವಾ । ತಾ । ವೃಂದಾರಕ ತರು ಎನಿಸಿದ ಸುಜನಕ್ಕೆ ।

ಅಂತೆಯೇ ಶ್ರೀದ ವಿಠ್ಠಲರು ಹೀಗೆ ಹೇಳುತ್ತಾರೆ.

ರಾಘವೇಂದ್ರ ಗುರುರಾಯರ ಸೇವಿಸಿರೋ । ಸೌಖ್ಯದಿ ಜೀವಿಸಿರೋ ।

ಕೊನೆಯಲ್ಲಿ ಶ್ರೀಗುರು ರಾಘವೇಂದ್ರರಿಗೆ ಮಂಗಳ ಪಾಡಿ ಈ ಲೇಖನ ಮುಗಿಸುವಾ

ಮಂಗಳಂ ಗುರುರಾಘವೇಂದ್ರರಾಯಗೆ । ಮಂಗಳಂ ಸುಜನಾಂಬುಧಿ ಚಂದ್ರಗೆ ।
ಜಯಮಂಗಳಂ ನಿತ್ಯ ಶುಭಮಂಗಳಂ ॥

**ಶ್ರೀಮಧ್ವೇಶಾರ್ಪಣಮಸ್ತು**

# ಅನುಬಂಧ ೨

## ಶ್ರೀ ಪುರಂದರದಾಸರ ಸುಭಾಷಿತ ಸಂಗ್ರಹ

೧. ಹರಿ ನಿನ್ನೊಲುಮೆಯು ಆಗುವ ತನಕ ಅರಿತು ಸುಮ್ಮನೇ ಇರುವುದೇ ಲೇಸು.

೨. ಸಕಲ ಗ್ರಹಬಲ ನೀನೇ ಸರಸಿಜಾಕ್ಷ.

೩. ಸಂಸಾರವೆಂಬಂಥ ಭಾಗ್ಯವಿರಲಿ, ಕಂಸಾರಿ ನೆನೆವಂಥ ಸೌಭಾಗ್ಯವಿರಲಿ.

೪. ಸಕಲವೂ ಹರಿಸೇವೆ ಎನ್ನಿ.

೫. ಆದದ್ದೆಲ್ಲ ಒಳಿತೇ ಆಯಿತು, ನಮ್ಮ ಶ್ರೀಧರನ್ನ ಸೇವೆಗೆ ಸಾಧನ ಸಂಪತ್ತಾಯಿತು.

೬. ಹರಿಭಕುತಿವುಳ್ಳವರ ಶರೀರವೇ ಕುರುಕ್ಷೇತ್ರ.

೭. ಹರಿಯು ದಾಸರಿಗಿನ್ನು ಸರಿಯುಂಟೆ ?

೮. ಸುಮ್ಮನೆ ಬರುವುದೆ ಮುಕ್ತಿ ನಮ್ಮ ಅಚ್ಯುತಾನಂತನ ನೆನೆಯದೆ ಭಕ್ತಿ.

೯. ಸಿಟ್ಟುಮಾಡಿದರುಂಟೆ ಶ್ರೀಕೃಷ್ಣನಲ್ಲಿ ಕೊಟ್ಟು ಹುಟ್ಟದ ಮುನ್ನ ಈ ಸೃಷ್ಟಿಯಲ್ಲಿ.

೧೦. ಹರಿಸ್ಮರಣೆ ಮಾಡೋ ನಿರಂತರ.

೧೧. ಹನುಮನ ಮತವೇ ಹರಿಯ ಮತವು. ಹರಿಯ ಮತವೇ ಹನುಮನ ಮತವು.

೧೨. ಮಧ್ವರಾಯರ ನೆನೆದು ಪರಿಶುದ್ಧರಾಗಿರೋ.

೧೩. ಹರಿಯೇ ಸರ್ವೋತ್ತಮ ಹರಿಯೇ ಪರದೇವತೆ ಹರಿಯಿಲ್ಲದನ್ಯತ್ರ ದೈವಗಳುಂಟೆ.

೧೪. ವಿಧಾತೃ ದೇವತೆಗಳೆಲ್ಲ ವಿಷ್ಣುವಿನ ಹಿಂದೆ.

೧೫. ಹಾಡಿದರೆ ಎನ್ನ ಒಡೆಯನ ಹಾಡುವೆ ಬೇಡಿದರೆ ಎನ್ನ ಒಡೆಯನ ಬೇಡುವೆ.

೧೬. ಮನಶುದ್ಧಿ ಇಲ್ಲದವಗೆ ಮಂತ್ರದ ಫಲವೇನು ?

೧೭. ದಾಸನಾದವಗೆ ವೈಕುಂಠದಲ್ಲಿ ವಾಸ.

೧೮. ಗುರುಕರುಣ ಹೊಂದುವದು ಪರಮ ದುರ್ಲಭವಯ್ಯ.

೧೯. ವಿಷಯದ ವಿಚಾರವ ಬಿಡು, ವಿಹಿತ ಕರ್ಮವ ಮಾಡು, ವೈರಾಗ್ಯಭಾಗ್ಯ ಬೇಡು.

೨೦. ನಂಬಿ ಕೆಟ್ಟವರಿಲ್ಲವೋ ರಂಗಯ್ಯನ ನಂಬದೇ ಕೆಟ್ಟರೆ ಕೆಡಲಿ.
೨೧. ನೆಚ್ಚದಿರೀ ಭಾಗ್ಯ ಯಾರಿಗೂ ಸ್ಥಿರವಲ್ಲ.
೨೨. ರೊಕ್ಕ ಎರಡಕ್ಕ ದುಃಖ ಕಾಣಕ್ಕ.
೨೩. ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ.
೨೪. ತನಗಿಲ್ಲದಾ ವಸ್ತು ಎಲ್ಲಿದ್ದರೇನು ?
೨೫. ಅನುಗಾಲವು ಚಿಂತೆ ಈ ಜೀವಕ್ಕೆ ಪುರಂದರವಿಠ್ಠಲನ ನೆನೆದರೆ ಚಿಂತೆ ನಿಶ್ಚಿಂತೆ.
೨೬. ಈಸಬೇಕು ಇದ್ದು ಜಯಿಸಬೇಕು.
೨೭. ಬೇವು ಬೆಲ್ಲದೊಳಿಡಲೇನು ಫಲ ?
೨೮. ಪಾಪಿ ಬಲ್ಲನೆ ಪರರ ಸುಖ ದುಃಖವ.
೨೯. ನಂಬದಿರು ಈ ದೇಹ ನಿತ್ಯವಲ್ಲ.
೩೦. ಇರಬೇಕು ಹರಿದಾಸರ ಸಂಗ ಧರೆಯೊಳಗೆ.
೩೧. ಮನ ನಿಲಿಸುವದು ಬಹು ಕಷ್ಟ.
೩೨. ಅಜ್ಞಾನಿಗಳ ಕೂಡ ಅಧಿಕ ಸ್ನೇಹಕ್ಕಿಂತ ಸುಜ್ಞಾನಿಗಳ ಕೂಡ ಜಗಳವೇ ಲೇಸು.
೩೩. ಮನದಲ್ಲಿ ದೃಢಭಕ್ತಿಯಿಲ್ಲದ ಮನುಜರು ತನುವ ನೀರೊಳಗದ್ದಿ ಫಲವೇನು?
೩೪. ಎಲ್ಲರೂ ಮಾಡುವದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ.
೩೫. ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ.
೩೬. ಅಂತರಂಗದಲಿ ಹರಿಯು ಕಾಣದವ ಹುಟ್ಟು ಕುರುಡನೋ.
೩೭. ಸತ್ಯವೆಂಬುದೇ ಸ್ನಾನ, ಉಪವಾಸ, ಜಪನೇಮ.
೩೮. ಹರಿಚಿತ್ತ ಸತ್ಯ ಹರಿಚಿತ್ತ.
೩೯. ದುಗ್ಗಾಣಿ ಎಂಬುದು ದುರ್ಜನರ ಸಂಗ.
೪೦. ಯಾರೂ ಸಂಗಡ ಬಾಹೋರಿಲ್ಲ. ನಾರಾಯಣನ ನಾಮ ನೆರೆ ಬಾಹೋ ದಲ್ಲದೇ.
೪೧. ಹೆತ್ತ ತಾಯಿತಂದೆಗಳ ಚಿತ್ತವ ನೋಯಿಸಿ ನಿತ್ಯದಾನವ ಮಾಡಿ ಫಲವೇನು?
೪೨. ಗಾಳಿ ಬಂದ ಕೈಯಲ್ಲಿ ತೂರಿಕೊಳ್ಳಿರೋ, ಬಾಯಿ ಮುಚ್ಚಬೇಡಿ ನಾರಾಯಣನ ನೆನೆಯಿರೋ.
೪೩. ಸಾಧುಸಜ್ಜನರೊಳಗಿರುವೋದೆ ಹಬ್ಬ.
೪೪. ಈ ಸಿರಿಯು ನಂಬಿ ಹಿಗ್ಗಲು ಬೇಡ ಮನವೇ, ವಾಸುದೇವನ ಭಜಿಸಿ ಸುಖಿ ಯಾಗು ಮನವೇ.
೪೫. ಸ್ನಾನವ ಮಾಡಿರೋ ಜ್ಞಾನ ತೀರ್ಥದಲಿ.
೪೬. ಎರಡು ಒಂದಾಗದೂ ರಂಗಾ, ಎರಡು ಒಂದಾಗದು.
೪೭. ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ.
೪೮. ಜ್ಞಾನ ಒಂದೇ ಸಾಕು ಮುಕ್ತಿಗೆ ಇನ್ನೇನು ಬೇಕು ಹುಚ್ಚು ಮರುಳೆ.

೪೯. ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆ ವಿಠಲನಾಮ ತುಪ್ಪವ ಬೆರೆಸಿ ಬಾಯಿ ಚಪ್ಪರಿಸಿರೋ.

೫೦. ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೋ.

೫೧. ನೆಚ್ಚಬೇಡ ಪ್ರಾಣಿ ಸಂಸಾರ ಸ್ಥಿರವೆಂದು ಹುಚ್ಚು ಬುದ್ಧಿಲಿ ನೀನು ಕೆಡಬೇಡ ಕಂಡ್ಯ

೫೨. ಹರಿಸರ್ವೋತ್ತಮನೆಂದು ಸ್ಮರಿಸದ ಜನರ ಸಂಗಬೇಡ,- ಸಿರಿವಾಯು ಮತ ಪೊಂದಿ ಹರುಷಪಡೆದವರ ಸಂಗಬೇಡ.

೫೩. ಕೋತಿ ಹಾಗೆ ಕುಣಿದಾಡಬೇಡ, ನೀತಿಮಾರ್ಗವ ಹಿಡಿಯೋ ಮೂಢ.

೫೪. ಜಗವ ಸುತ್ತಿಹುದೆಲ್ಲ ನಿನ್ನ ಮಾಯವಯ್ಯ.

೫೫. ಸೋಹಮೆನ್ನಬೇಡಲೋ ದಾಸೋಹಮೆಂದು ಪೇಳಲೋ.

೫೬. ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡಿ, ಬಿಟ್ಟು ಕೆಡಬೇಡಿ.

೫೭. ಒಂದೇ ನಾಮದಲಡಗಿದವೋ ಆನಂದದಿಂದುಸಿದ ಅಖಿಲ ವೇದಗಳು.

೫೮. ಅರಿಯದವನಿಗೆ ವಿಚಿತ್ರ ಹರಿಗೆ ಲೀಲಾ ಮಾತ್ರ.

೫೯. ಒಮ್ಮೆ ನೆನೆಯುರು ನಮ್ಮ ದೇವ ಗಮ್ಮನೆ ಓಡಿ ಬರುವ.

೬೦. ಇಕೋ ನಮ್ಮ ಸ್ವಾಮಿ ಜಗದಂತರ್ಯಾಮಿ.

೬೧. ನಾರಸಿಂಹನೆಂಬ ದೇವರು ನಂಬಿದಂಥ ನರರಿಗೆಲ್ಲ ವರವ ಕೊಡುವನು.

೬೨. ಭೂಮಂಡಲಕ್ಕೆ ಪಾಂಡುರಂಗ ವಿಠ್ಠಲ ಪರದೈವವೆಂದು ಡಂಗುರವ ಸಾರಿರಯ್ಯ.

೬೩. ಗಂಗಾದಿ ಸಕಲ ತೀರ್ಥಗಳಿಗಧಿಕ ಶ್ರೀಹರಿಯ ನಾಮ.

೬೪. ಪರಾಕುಮಾಡದೇ ಪರಾಂಬರಿಸಿ ಎನ್ನ ಅಪರಾಧಗಳ ಕ್ಷಮಿಸಯ್ಯ.

೬೫. ಸತ್ಯಂ ಜಗಕಿದು ಪಂಚಭೇದವು ನಿತ್ಯ ಶ್ರೀ ಗೋವಿಂದನ, ಕೃತ್ಯ ತಿಳಿದು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ.

೬೬. ಹರಿಕಥಾ ಶ್ರವಣಮಾಡೋ.

೬೭. ಮಂಚಬಾರದು ಮಡದಿ ಬಾರಳು ಕಂಚು ಕನ್ನಡಿ ಬಾರದು, ಸಂಚಿತಾರ್ಥದ ದ್ರವ್ಯ ಬಾರದು ಮುಂಚೆ ಮಾಡಿರಿ ಧರ್ಮವ.

೬೮. ಎಲ್ಲಿ ಶ್ರೀ ತುಳಸಿವನವು ಅಲ್ಲಿ ಬಪ್ಪುವರು ಸಿರಿನಾರಾಯಣರು.

೬೯. ಕಾವ ದೇವ ನೀನಲ್ಲದೇ ಜಗಕೆ ಇನ್ನಾವ ದೇವರುಳ್ಳರೈ.

೭೦. ಗೋವಿಂದನ ಧ್ಯಾನ ಬಲು ಶುಭಕರವೋ ಭಾವಿಸಿ ನೋಡಲು ಬಹು ಜನ್ಮಗಳ ಪಾಪಹರವೋ.

೭೧. ಹರಿಯು ಬಿಟ್ಟರೆ ಗತಿಯಿಲ್ಲ, ಮಾರುತಿ ಮರೆತರೆ ಸಾಧನವಿಲ್ಲ.

೭೨. ಏನು ಮಾಡಿದರೇನು ಭವ ಹಿಂಗದು, ದಾನವಾಂತಕ ನಿನ್ನ ದಯವಾಗದನಕ.

೭೩. ನಾರಾಯಣ ನಿನ್ನ ನಾಮಾಮೃತವನು ಎನ್ನ ನಾಲಿಗೆಯಲಿ ನಿಲ್ಲಿಸಯ್ಯ.

೭೪. ಕೊಡುವ ಕರ್ತೃ ಬೇರೆ ಇರುತಿರೆ ಬಿಡು ಬಿಡುಚಿಂತೆಯನು.

೭೫. ಕಲಿಯುಗದೊಳು ಹರಿನಾಮವ ನೆನೆದರೆ ಕುಲಕೋಟಿಗಳುದ್ಧರಿಸುವವು.

೭೬. ಕರ್ಮಬಂಧ ಛೇದನಾ ರಘುರಾಮನ ನಾಮ ನೀ ನೆನೆ ಮನವೆ.

೭೭. ನಾ ಡೊಂಕಾದರೆ ನಿನ್ನ ನಾಮ ಡೊಂಕೇ ವಿಠ್ಠಲ ?

೭೮. ಸಾಕು ಸಾಕಿನ್ನು ಸಂಸಾರ ಸುಖವು ಶ್ರೀಕಾಂತ ನೀನೊಲಿದು ಕರುಣಿಸೈ ಹರಿಯೆ.

೭೯. ಹರಿಹರಿ ಹರಿಯೆಂದು ಸ್ಮರಿಸುವ ಜನರಿಗೆ ದುರಿತವೆತ್ತಣದು?

೮೦. ನರನಾದ ಮೇಲೆ ಹರಿನಾಮ ಜಿಹ್ವೆಯೊಳಿರಬೇಕು.

೮೧. ನಾನೇಕೆ ಬಡವನೋ ನಾನೇಕೆ ಪರದೇಶಿ ಶ್ರೀನಿಧೇ ಹರಿ ಎನಗೆ ನೀನಿರುವ ತನಕ.

೮೨. ಹರಿಕೃಪೆಯಲಿ ತಾನೊಲಿದದ್ದಾದರೆ ಉರುತರ ಮೋಕ್ಷವೇ ಸಾಕ್ಷಿ.

೮೩. ನಾ ಮಾಡಿದ ಕರ್ಮ ಬಲವಂತವಾದರೆ ನೀ ಮಾಡುವುದೇನೋ ದೇವ.

೮೪. ಹೂವ ತರುವರ ಮನೆಗೆ ಹುಲ್ಲ ತರುವ.

೮೫. ಬಂದದ್ದೆಲ್ಲ ಬರಲಿ ಗೋವಿಂದನ ದಯವೊಂದಿರಲಿ.

೮೬. ದಾಸರ ನಿಂದಿಸಬೇಡ ಮನುಜ ಹರಿದಾಸರ ನಿಂದಿಸಬೇಡ.

೮೭. ಮರೆಯಬೇಡ ಮನವೆ ನೀನು ಹರಿಯ ಚರಣವ.

೮೮. ರಾಮಮಂತ್ರವ ಜಪಿಸೋ ಹೇ ಮನುಜಾ.

೮೯. ನೀನೆ ಅನಾಥ ಬಂಧು ಕಾರುಣ್ಯ ಸಿಂಧು.

೯೦. ನಾ ನಿನ್ನ ಧ್ಯಾನದೊಳಿರಲು ಸದಾ, ಹೀನಮಾನವರೇನು ಮಾಡಬಲ್ಲರೋ ರಂಗಾ.

೯೧. ಕಾಯಲಾರೆನೋ ಕೃಷ್ಣ ಕಂಡವರ ಬಾಗಿಲನು ನಾಯಿಕುನ್ನಿಯಂತೆ ಪರರ ಪೀಡಿಸುತ.

೯೨. ಒಲ್ಲನೋ ಹರಿಕೊಳ್ಳನೋ, ಎಲ್ಲ ಸಾಧನವಿದ್ದು ತುಳಸಿ ಇಲ್ಲದ ಪೂಜೆ.

೯೩. ಈ ಪರಿಯ ಸೊಬಗಾವದೇವರಲಿ ನಾ ಕಾಣೆ ಗೋಪಿಜನಪ್ರಿಯ ಗೋಪಾಲಗಲ್ಲದೇ.

೯೪. ಹಿಡಕೋ ಬಿಡಬೇಡ ರಂಗನ ಪಾದವ.

೯೫. ನಿನ್ನ ನಾಮವೆ ಎನಗೆ ಅಮೃತಾನ್ನವು.

೯೬. ಕೃಷ್ಣ ಎನಬಾರದೆ, ಕೃಷ್ಣನ ನೆನೆದರೆ ಕಷ್ಟ ಒಂದಿಷ್ಟಿಲ್ಲ.

೯೭. ಇದು ಭಾಗ್ಯವಿದು ಭಾಗ್ಯವಯ್ಯ, ಪದುಮನಾಭನ ಪಾದ ಭಜನೆ ಸುಖವಯ್ಯ.

೯೮. ಸಾಮಾನ್ಯವಲ್ಲ ಶ್ರೀ ಹರಿಸೇವೆ ಪಾಮರ ಜನರಿಗೆ.

೯೯. ಅಪಮಾನವಾದರೆ ಒಳಿತು. ಅಪರೂಪ ಹರಿನಾಮ ಜಪಿಸುವ ಮನುಜಗೆ,

೧೦೦. ಕಲ್ಲುಸಕ್ಕರೆ ಕೊಳ್ಳಿರೋ ನೀವೆಲ್ಲರು, ಪುಲ್ಲಲೋಚನ ಶ್ರೀ ಕೃಷ್ಣನ ನಾಮವೆಂಬ.

೧೦೧. ಶ್ರೀಹರಿಯೇ ನಿನ್ನನು ಒಲಿಸಬಹುದು, ನರರೊಲಿಸುವದು ಬಹುಕಷ್ಟ.

೧೦೨. ಸೃಷ್ಟಿ ಮಾಡಿದ ದೇವ ಸ್ಥಿತಿ ಮಾಡಲರಿಯನೆ, ಗಟ್ಯಾಗಿ ಸಲುಹುವ ಪುರಂದರ ವಿಠ್ಠಲ.

೧೦೩. ಕಾಲಕಾಲದಿ ಹರಿಕಲ್ಯಾಣ ಗುಣಗಳ ಕೇಳದವನ ಜನ್ಮ ವ್ಯರ್ಥ ಪುರಂದರ ವಿಠ್ಠಲ.

ಶ್ರೀ ಮಧ್ವೇಶಾರ್ಪಣಮಸ್ತು

# ಶ್ರೀ ವಿಜಯದಾಸರ ಸುಭಾಷಿತಗಳು

೧. ಮಧ್ವಮತವ ಪೊಂದದವನ ಭಕುತಿಯಾತಕೆ ?

೨. ಮಧ್ವರಾಯರ ಕರುಣ ಪಡೆಯದವ ಧರೆಯೊಳಗೆ ಇದ್ದರೇನು ? ಇಲ್ಲದಿದ್ದರೇನು ?

೩. ಪೊಟ್ಟೆಗೋಸುಗ ಭ್ರಷ್ಟರ ಸ್ತುತಿಸಿ ನೀ ಕೆಟ್ಟು ಪೋಗುವಿಯಾತಕೋ ಜೀವವೇ ?

೪. ಆದದ್ದಾಯಿತು ಹೋದ ಮಾತುಗಳೇಕೆ ? ಶ್ರೀಧರ ವಿಜಯವಿಠ್ಠಲನ ಮರೆಯದಿರು.

೫. ಗೋವಿಪ್ರರ ಸೇವೆ ಮಾಡು ಸೋಹಂಭಾವಗಳ ಬಿಟ್ಟು ದಾಸತ್ವ ಕೂಡು.

೬. ಮನವೇ ನೀ ದೃಢವಾದರೆ ಮನಸಿಜನಯ್ಯನ ಚರಣ ಕಾಂಬೆನು ನಾನು.

೭. ಕೊಡುವವನು ನೀನು, ಕೊಂಬುವವನು ನೀನು ಬಡಮನದ ಮನುಜನ ಬೇಡಿ ಫಲವೇನು ?

೮. ದಾನವನ್ನು ಮಾಡದವನ ದ್ರವ್ಯ ಯಾತಕೆ ?

೯. ಕೃಷ್ಣಾರ್ಪಿತವೆಂದು ಕೊಡಲು ಎಳ್ಳಷ್ಟಾದರೂ ಮೇರುಪರ್ವತ ಮೀರುವದು

೧೦. ಹರಿಯ ಮರೆದುದಕ್ಕಿಂತ ಪಾಪವಿಲ್ಲ, ಹರಿಯ ಸ್ಮರಣೆಯಿಂದಧಿಕ ಪುಣ್ಯ ಮತ್ತೊಂದಿಲ್ಲ.

೧೧. ದಾಸ ದಾಸ ದಾಸರ ದಾಸ್ಯವ ಕೊಡು ದೋಷರಾಶಿಯನಳಿದು-

೧೨. ಆರೇನು ಮಾಡುವರು ಅವನಿಯೊಳಗೆ ಪೂರ್ವಜನ್ಮದ ಕರ್ಮ ಫಣೆಯಲ್ಲಿ ಬರೆದುದಕೆ-

೧೩. ಕಾಮಾತುರಗೆ ಉಂಟೆ ಭಯ ತುರಿತ ಲಜ್ಜೆಗಳು.

೧೪. ಗುರುಭಕ್ತಿ ಪ್ರಧಾನ ಸಾಧನವೋ ನಿತ್ಯ ಗುರು ಶುಶ್ರೂಷೆ ಮಹಾಕರ್ಮ ನಾಶವು.

೧೫. ಸುಡು ಸುಡು ಯಾಚಕನ ಜನ್ಮ ವ್ಯರ್ಥ ವ್ಯರ್ಥ.

೧೬. ಊರ್ಧ್ವಪುಂಡ್ರ ತಿದ್ದದವನ ಕರ್ಮವ್ಯಾತಕೆ·

೧೭. ಏಕಾದಶಿಯ ಮಾಡದವನ ವ್ರತವು ಯಾತಕೆ ?

೧೮. ಈಗಲೋ ಇನ್ನಾಗಲೋ ಈ ಗಾತ್ರ ಸ್ಥಿರವಲ್ಲ, ಭೋಗದಾಸೆಯ ಬಿಡು ಜಾಗು ಮಾಡದಲೆ.

೧೯. ವೇದ ಶ್ರುತಿಶಾಸ್ತ್ರ ಓದಿದರೇನು ? ಸಾಧುಗಳಿಗೆ ಸೋತು ನಡೆಯದ ತನಕ.

೨೦. ಭಗವನ್ನಿಷ್ಠೆಯಲ್ಲಿ ಭಾಗ್ಯವಂತನಾಗು.
೨೧. ತತ್ವಸಾರದ ಬುತ್ತಿಕಟ್ಟು ಉತ್ತಮ ಮಾರ್ಗದ ಸೋಪಾನ ಕಟ್ಟು.
೨೨. ಸಂತೆ ಕೂಟ ನೆರೆದ ತೆರದಂತೆ ಸಂಸಾರದ ಮಾಯಾ ತಂತ್ರ.
೨೩. ಸರ್ವಸಾಧನದೊಳಗೆ ನಿನ್ನ ನಾಮಕೆ ಸರಿ ಊರ್ವಿಯೊಳಗೆ ಇಲ್ಲ.
೨೪. ವಿಜಯವಿಠ್ಠಲನ್ನ ನೀನೇ ಎನ್ನದವ ಜ್ಞಾನಿಯಾದರೇನು ?
೨೫. ಕೆಸರು ತುಳಿದು ಬಂದು ಮರಳಿ ಕೆಸರಲ್ಲಿ ಚರಣವ ತೊಳೆದಂತೆ ಈ ಕರ್ಮ.
೨೬. ಛಿದ್ರಗೋಣಿಯಲ್ಲಿ ಉತ್ತಮ ಸರಕನು ತುಂಬಿ ಬಿದ್ದು ಪೋಗದಲೆ ಸೇರುವದೆ?
೨೭. ಕಪಿಯ ಕೈಯಲ್ಲಿ ಮಾಣಿಕ್ಯ ಸಿಕ್ಕಂತೆ.
೨೮. ಹರಿದಾಸರೊಂದು ಚರಣವಿಟ್ಟ ಭೂಮಿ ಕುರುಕ್ಷೇತ್ರಕಧಿಕವೆಂದೆನಿಸುವದು.
೨೯. ಮುದ್ರಾಂಕಿತರಹಿತ ಮಾನವನು ದಾನವನು.
೩೦. ಭೃಂಗ ಸಂಪಿಗೆ ರಸ ಸವಿದು ಜೀವಿಸುವದೇ ?
೩೧. ಧೇನು ಪಾಲಿಸಿದಂತೆ ಕೋಣನ್ನ ಸಾಕಿದರೆ ಏನಾದರೂ ಕ್ಷೀರ ಸೊನೆವುಂಟೆ?
೩೨. ಘಾಳಿಗೆ ಬೆವರಿಲ್ಲ. ನಿನ್ನವರಿಗೆ ಕೇಡಿಲ್ಲ.
೩೩. ಕೋಡಗದ ಕೈಯ ಕನ್ನಡಿ ಸಿಕ್ಕರೆ ನೋಡಿಕೊಂಡು ಸುಖ ಪಡಬಲ್ಲುದೆ ?
೩೪. ಕಳ್ಳಿಯ ಹಾಲನು ಕರತಂದು ಮಜ್ಜಿಗಿಯಲ್ಲಿ ಹೆಪ್ಪು ಕೊಡಲು ಫಲಿಸೋದೇ?
೩೫. ವಸ್ತ್ರಮುಂದಿಟ್ಟಿರಲು ವಶವಮಾಡಿಕೊಳದೆ ಅಸ್ತ್ರಪಿಡಿದು ಬಳಲಿ ಸೊರಗಿದಂತೆ.
೩೬. ಅನ್ನದಾನಕ್ಕಿಂತ ಇನ್ನು ಮಿಗಿಲೆ ಇಲ್ಲಾ.
೩೭. ಹರಿನಾಮ ನೆನೆವುದೆ ಹಬ್ಬ.
೩೮. ಪರಸತಿಯ ಕೂಟ ಕಾಳ ಕುಡಿದ ಲೇಸ.
೩೯. ಕೋಪದವನ ಸಂಗಡಲಿರೆ ಮಡಿಯೆಲ್ಲಿ ?
೪೦. ಮಣ್ಣು ತೂರಿ ತೂರಿ ಧಾನ್ಯ ಆರಿಸಿದಂತೆ.
೪೧. ವಿಜಯವಿಠ್ಠಲನ ಶರಣರ ನಂಬಲು ಸಂಸಾರ ಹರ.
೪೨. ತಾರಮಂತ್ರ ಜಪಿಸು ತವಕದಿಂದಲಿ ಭವತಾರವಾಗುವದು ಚೆನ್ನಾಗಿ.
೪೩. ಬಹಿರ ಶೂನ್ಯನಾಗಿ ಚಲಿಸು ಅಂತರಂಗದಲ್ಲಿ ಮಹದೈವ ವಿಜಯವಿಠ್ಠಲನ ಪಾದವ ಕಾಣು.
೪೪. ಹಕ್ಕಲ ದೈವಗಳ ಹಾದಿಗೆ ಬೇಲಿ ಬಡಿದು ರಕ್ಕಸಾಂತಕ ವಿಜಯವಿಠ್ಠಲನ್ನ ಕೊಂಡಾಡು.
೪೫. ಸುಖವಿಲ್ಲ ಸುಖವಿಲ್ಲ ಸಂಸಾರವೆಂಬೋದು, ಸಖನಾದ ವಿಜಯವಿಠ್ಠಲನ್ನ ನೆನೆಸು ಮನವೆ.

ಶ್ರೀ ಮಧ್ವೇಶಾರ್ಪಣಮಸ್ತು

# ಫಲವಿದು ಬಾಳ್ದುದಕೆ

(ಅಣು ಹರಿಕಥಾಮೃತಸಾರ)

ಶ್ರೀ ಜಗನ್ನಾಥದಾಸರು

ಫಲವಿದು ಬಾಳ್ದುದಕೆ ಸಿರಿ
ನಿಲಯನ ಗುಣಗಳ ತಿಳಿದು ಭಜಿಸುವದೆ ॥ ಪ ॥

ಶ್ರಿಯಃ ಪತೇರ್ಗುಣಾನ್ ಜ್ಞಾತ್ವಾ ಭಕ್ತ್ಯೋಪಾಸ್ತೇ ನರೋತ್ತಮಃ ।
ತಜ್ಜನ್ಮ ಸಫಲಂ ವಿದ್ಧಿ ಮನುಷ್ಯಾಣಾಂ ಖಗೇಶ್ವರ ॥ ಗಾರುಡೇ ॥

ಸ್ವೋಚಿತ ಕರ್ಮಗಳಾಚರಿಸುತ ಬಲು-
ನೀಚರಲ್ಲಿ ಪೋಗ್ಯಾಚಿಸದೆ ।
ಖೇಚರವಾಹ ಚರಾಚರ ಬಂಧಕ-
ಮೋಚಕನಹುದೆಂದ್ಯೋಚಿಸುತಿಪ್ಪುದೆ ॥ ೧ ॥

ಅಭಕ್ತಯಾಚಿತಂ ಹ್ಯನ್ನಂ ಹರಿಭಕ್ತಸ್ಯ ವೈಖಗ
ಇಹಲೋಕೇಯಾತನೇ ಚ ಮಹಾ ದುಃಖಪ್ರದೋ ಭವೇತ್ ॥
ಅವೈಷ್ಣವ ಕೃತಂ ದಾನಂ ಹರಿಭಕ್ತಸ್ಯ ದುಃಖದವ್ ॥ ಗಾರುಡೇ ॥
ದ್ವೇ ಕರ್ಮಣಿ ನರಃ ಕುರ್ವನ್ ಅಸ್ಮಿನ್‌ಲೋಕೇವಿರಾಜತೆ ।
ಅಬ್ರುವನ್ ಪರುಷಂ ಕಿಂಚಿತ್ ಅಸತೋನಾರ್ಥಯಂಸ್ತಥಾ ॥
ಉದ್ಯೋಗಪರ್ವ ಭಾರತೇ

ಈಶಾವಾಸ್ಯಮಿದಂ ಸರ್ವಂ ಯತ್ಕಿಂಚಿಜ್ಜಗತ್ಯಾಂ ಜಗತ್ ।
ತೇನ ತ್ಯಕ್ತೇನ ಭುಂಜೀಥಾ ಮಾಗೃಧಃ ಕಸ್ಯಸ್ವಿದ್ಧನವ್ ॥
ಈಶಾವಾಸ್ಯೋಪನಿಷತ್

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ ॥
ವರ್ಣಾಶ್ರಮೋಚಿತಂ ಕರ್ಮ ಕುರ್ವನ್ನಾಸ್ತೇ ಖಲಾನ್ ಪ್ರತಿ ।
ನಯಾಚತೇ ಯಃ ಪುರುಷಃ ಲೋಕೇಽಸ್ಮಿನ್ ಪ್ರವಿರಾಜತೇ ॥ಸ್ಕಾಂದೇ॥
ಬಂಧಕೋ ಭವಪಾಶೇನ ಭವ ಪಾಶಾಚ್ಚ ಮೋಚಕಃ ।

ಕೈವಲ್ಯದಂ ಪರಂಬ್ರಹ್ಮ ವಿಷ್ಣುರೇವ ನ ಸಂಶಯಃ ॥

ಶ್ರೀ ವಿಷ್ಣುತತ್ವವಿನಿರ್ಣಯೇ ।

ನಿಚ್ಚ ಸುಭಕುತಿಯೊಳಚ್ಯುತನಂಘ್ರಿಗ-
ಳರ್ಚಿಸಿ ಮೆಚ್ಚಿಸುತೆಚ್ಚರದಿ ।
ತುಚ್ಛವಿಷಯಗಳನಿಚ್ಛೈಸದೆ ಯ-
ದೃಚ್ಛಾ ಲಾಭದಿ ಪ್ರೋಚ್ಯನಾಗುವದೇ ॥ ೨ ॥

ವಿಷ್ಣುಪೂಜಾಂ ಚ ಕುರ್ವಂತಿ ನವಭಕ್ತಿ ಸಮನ್ವಿತಾಃ ।
ಯದೃಚ್ಛಾಲಾಭ ಸಂತುಷ್ಟಾಃ ಬಹುಧನ್ಯಾ ಮಹೀತಲೇ ॥
ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಂ ।
ಇತಿ ಪುಂಸಾರ್ಪಿತಾ ವಿಷ್ಣೌ ಭಕ್ತಿಶ್ಚ ನವಲಕ್ಷಣಾ ॥ ಗಾರುಡೇ
ಯದೃಚ್ಛಾಪ್ರಾಪ್ತದ್ರವ್ಯೇಣ ಯೇತು ಸಂತುಷ್ಟಾಸ್ತೇಹ್ಯತ್ರಯೋಗ್ಯಾಃ

ಸದೈವ ॥ ಗಾರುಡೇ

ಯದೃಚ್ಛಾಲಾಭತುಷ್ಟಸ್ಯ ತೇಜೋ ವಿಪ್ರಸ್ಯ ವರ್ಧತೇ ।
ತತ್ ಪ್ರಶಾಮ್ಯತ್ಯಸಂತೋಷಾದಂಭಸೇವಾಶುಶುಕ್ಷಣಿಃ ॥ (೮-೧೯-೨೬)

ಭಾಗವತೇ

ಯದೃಚ್ಛಾಲಾಭ ಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।
ಸಮಃ ಸಿದ್ಧಾವ ಸಿದ್ಧೌ ಚ ಕೃತ್ವಾಪಿ ನ ನಿಬದ್ಧ್ಯತೇ ॥ ಗೀತಾ (೪-೨೨)

ಮನವಾಕ್ಕಾಯದೊಳನುಭವಿಸುವ ದಿನ-
ದಿನದ ವಿಷಯ ಸಾಧನಗಳನು ।
ಅನಿಲಾಂತರ್ಗತ ವನರುಹದಳಲೋ-
ಚನಗರ್ಪಿಸಿ ದಾಸನು ನಾನೆಂಬುದೆ ॥ ೩ ॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾವಾನುಸೃತಃ

ಸ್ವಭಾವಂ ।

ಕರೋತಿ ಯದ್ಯತ್ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯೇತ್ತತ್॥

ಭಾಗವತೇ

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್ ।
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥ ಗೀತಾ ೯-೨೭
ದೇಹಿನಾಯಾಃ ಪ್ರವರ್ತಂತೇ ಪ್ರಾತರಾರಭ್ಯ ಸ್ವಾಕ್ರಿಯಹಾಃ ।
ತಾಸಾಂ ವಿಷ್ಣ್ವರ್ಪಣಂ ಕುರ್ವನ್ ಕರ್ಮಪಾಶೈರ್ವಿಮುಚ್ಯತೇ ॥

ಮಾಘ ಮಹಾತ್ಮೆ

ಸರ್ವೋತ್ತಮತ್ವ ವಿಜ್ಞಾನಂ ಕುರ್ವಂಸ್ತತ್ರ ಮನಃಸದಾ ।
ಸದಾಧಿಕ ಪ್ರೇಮಯುಕ್ತಂ ಸರ್ವಾಣ್ಯತ್ರ ಸಮರ್ಪಣಮ್ ॥

ಗೀತಾ ತಾತ್ಪರ್ಯೇ

ಸದಾ ಹರಿರ್ಮಮ ಸ್ವಾಮೀ ದಯಾಲುಃ ಹರೇ ಹರೇ ತವದಾಸಾನುದಾಸಃ ।
ಮಾಂ ಪಾಹಿ ಕೃಷ್ಣ ತವ ವಂದಯಾಮಿ ಇತ್ಯುಕ್ತ್ವಾಪ್ರಣಾಮಂ
ಕಾರಯೇತ್ ದಂಡರೂಪವತ್ ॥

ತ್ವದ್‌ಭೃತ್ಯ ಭೃತ್ಯ ಪರಿಚಾರಕ ಭೃತ್ಯಭೃತ್ಯ ।
ಭೃತ್ಯಸ್ಯ ಭೃತ್ಯ ಇತಿಮಾಂ ಸ್ಮರಲೋಕನಾಥ ॥ ಗಾರುಡೇ

ವಾಸವ ಮುಖ ವಿಬುಧಾಸುರ ನಿಚಯಕೆ
ವಾಸುದೇವನೇ ಶುಭಾಶುಭದಾ ।
ಈ ಸಮಸ್ತ ಜಗಕೀಶ ಕೇಶವಾ
ನೀಶ ಜೀವರೆಂಬೀ ಸುಜ್ಞಾನವೆ ॥ ೪ ॥

ಅಗ್ನಿನಾಸಿಕ್ಯವಾಯುಶ್ಚ ದಿಕ್ಪಾಃ ಇಂದ್ರಾದಯೋಽ ಖಿಲಾಃ ।
ಸೂರ್ಯಸೋಮಶ್ಚರುದ್ರಶ್ಚ ತೇನೈವ ಸ್ವಪದೇ ಸ್ಥಿತಾಃ ॥
ಸಮಾಯು ರುದ್ರ ಶಕ್ರಾದ್ಯಾ ವಾಸುದೇವ ಬಲಾಶ್ರಯಾಃ ।
ಯಃ ಪಶ್ಯೇತ್ ಸ್ಥಿರಯಾ ಬುದ್ಧ್ಯಾಭಕ್ತಿಮಾನ್ ಸ ವಿಮುಚ್ಯತೇ॥ ಭಾಗವತೇ॥
ಪ್ರಾಪಕಃ ಸರ್ವದೇವಾನಾಂ ಪದಾನಾಂ ಪುರುಷೋತ್ತಮಃ ।
ವಿಷ್ಣುನೈವ ತಮೋಯಾಂತಿ ಕಲ್ಯಾದ್ಯಾಸ್ತು ಅಸುರಾಃ ಸದಾ ॥ ಹರಿವಂಶೇ
ಸಮಸ್ತ ಜಗತಃ ಸ್ವಾಮೀ ವಿಷ್ಣುರೇವ ನ ಚಾಪರಃ ।

ಪಂಚಭೇದ ಪ್ರಪಂಚ ಸುಸತ್ಯ ವಿ-
ರಿಂಚಿ ಮುಖರು ಬಲಿವಂಚಕಗೆ
ಚಂಚಲ ಪ್ರತಿಮೆಯು ಅಚಂಚಲ ಪ್ರಕೃತಿಯು
ಸಂಚಿಂತಿಸಿ ಮಾದ ಲಾಂಛನನಾಹುದೆ ॥ ೫ ॥

ಜೀವಶ್ಚ ಸತ್ಯಃ ಪರಮಾತ್ಮಾಚ ಸತ್ಯಃ ತಯೋರ್ಭೇದಃ ಸತ್ಯ ನಿತ್ಯಃ
ಸದಾಽಪಿ ।
ಜಡಶ್ಚ ಸತ್ಯೋ ಜೀವ ಜಡಯೋಶ್ಚ ಭೇದಃ ಜಡೇಶಯೋ ಭೇದ ಸತ್ಯಃ
ಸದೈವ ।
ಸರ್ವೇಷಾಂ ಜೀವಾನಾಂ ಸರ್ವದಾ ಭೇದಸತ್ಯಃ ತಥಾಜಡಾನಾಂ ಭೇದ
ಸತ್ಯಃ ಸದಾಽಪಿ ॥ ಗಾರುಡೇ
ಜಗತ್‌ಪ್ರವಾಹ ಸತ್ಯೋಽಯಂ ಪಂಚಭೇದ ಸಮನ್ವಿತಃ ॥ ನಿರ್ಣಯೇ

ಸರ್ವಾಣ್ಯೇತಾನಿ ತತ್ವಾನಿ ಬ್ರಹ್ಮಾತು ಪುರುಷಃ ಸ್ಮೃತಃ
ಮಹಾಂಶ್ಚಾವ್ಯಕ್ತನಾಮ್ನೀಚ ಬ್ರಹ್ಮಾಣೀ ಪರಿಕೀರ್ತಿತಾ ॥
ಏವಂ ವಾಯುರಪಿ ಜ್ಞೇಯೋ ಭಾರತೀ ಚೈವ ತತ್‌ತ್ರಯಂ ॥
ರುದ್ರೋಽಹಂಕಾರ ಉದ್ದಿಷ್ಟಃ ಸ್ಕಂದೇಂದ್ರೌ ಮನ ಉಚ್ಯತೇ ॥
ಅಹಂಕಾರ ಶೇಷವೀಂದ್ರಾವಪಿ ವಿದ್ವದ್ಭಿಃ ಈರಿತೌ ॥
ದಿಕ್ ವಾಯುಸೂನು ಸೂರ್ಯಶ್ಚ ವರುಣಶ್ಚಾಶ್ವಿನಾವಪಿ ।
ವಹ್ನಿದಕ್ಷಾವೀಂದ್ರ ಸೂನುಃ ಮಿತ್ರಶ್ಚೈವ ಮನುಸ್ತಥಾ ॥
ಇಂದ್ರಿಯಾಖ್ಯಾ ಶಬ್ದನಾಮಾ ಬೃಹಸ್ಪತಿರುದಾಹೃತಃ ।
ಅನ್ಯೇತು ಸೂನವೋ ವಾಯೋ ರುದ್ರಸ್ಯಾಪಿ ಪ್ರಕೀರ್ತಿತಾಃ ॥
ಅಂತರ್ಯಾಮೀ ತಥಾ ಧ್ಯೇಯಃ ಸರ್ವ ದೇವೇಷು ಸರ್ವದಾ ।
ಏತೇಷು ಭಗವಾನ್ ವಿಷ್ಣುಃ ಪ್ರಧಾನ ತನುರೇವ ಚ ॥ ತಂತ್ರಸಾರೇ

ಪ್ರತಿಮೇ ದ್ವೇ ಹರೇಸ್ತಸ್ಯ ಚಲಾಚಲ ವಿಭೇದತಃ ।
ಚಲಾ ಬ್ರಹ್ಮಾದಯಃ ಪ್ರೋಕ್ತಾಸ್ತ್ವಚಲಾ ಪ್ರಕೃತಿ ಸ್ಮೃತಾ ॥ ವಾಮನೇ
ಜೀವೇಶ್ವರ ಭಿದಾಚೈವ ಜಡೇಶ್ವರ ಭಿದಾ ತಥಾ ।
ಜೀವ ಭೇದೋಮಿಥಶ್ಚೈವ ಜಡಜೀವ ಭಿದಾತಥಾ ।
ಮಿಥಶ್ಚ ಜಡಭೇದೋಽಯಂ ಪ್ರಪಂಚೋ ಭೇದಪಂಚಕಃ
ಶ್ರೀ ವಿಷ್ಣುತತ್ವವಿನಿರ್ಣಯೇ

ಪಂಚ ಋತುಗಳಲಿ ಪಂಚಾಗ್ನಿಗಳಲಿ
ಪಂಚ ಪಂಚರೂಪವ ತಿಳಿದು
ಪಂಚ ಸುಸಂಸ್ಕಾರಾಂಚಿತನಾಗಿ ದ್ವಿ
ಪಂಚಕರಣದಲಿ ಪಂಚಕನರಿವುದೆ ॥ ೬ ॥

ಋತುಷು ಪಂಚವಿಧಂ ಸಾಮೋಪಾಸಿತ ವಸಂತೋ ಹಿಂಕಾರೋ ಗ್ರೀಷ್ಮಃ
ಪ್ರಸ್ತಾವೋ ವರ್ಷಾ ಉದ್ಗೀಥಃ ಶರತ್ ಪ್ರತಿಹಾರೋ ಹೇಮಂತೋ
ನಿಧನಮ್ ॥
ಕಲ್ಪಂತೇ ಹಾಸ್ಮಾ ಋತವ ಋತುಮಾನ್ ಭವತಿ ಯ ಏತದೇವಂ
ವಿದ್ವಾನ್ ಋತುಷು ಪಂಚವಿಧಂ ಸಾಮೋಪಾಸ್ತೇ॥ ಛಾಂದೋಗ್ಯೋಪನಿಷದಿ
ಹೇಮಂತ ಶಿಶಿರಯೋರೈಕ್ಯೇನ ಪಂಚತ್ವಮ್ ।
ಋತುನಾಮಾನಮೃತುಗಮ್ಯತತ್ವಾತ್ ಋತುನಾಮಕಃ ।
ಇತ್ಯುಪಾಸೀತಯೋ ವಿಷ್ಣುಂ ಪಂಚಾತ್ಮಾನ ಮಪಾಉಷ್ಯಹಿ ।

ಮೋಕ್ಷಾದೀನ್ ಕಲ್ಪತೇ ಚಾಸ್ಯ ಋತುಸಂಸ್ಥೋ ಜನಾರ್ದನಃ ।
ರಕ್ಷ್ಯತ್ವಾತ್ತೇನ ತದ್ವಾಂಶ್ಚ ಸದೈವ ಸ್ಯಾದುಪಾಸಕ ಇತಿ ಚ ।
ವಾಸಸ್ಯ ಸುಖಕಾರಿತ್ವಾದ್ವಸಂತಃ ಪುರುಷೋತ್ತಮಃ ।
ನೀರಾದೇರ್ಗರಣಾದ್ ಗ್ರೀಷ್ಮೋ ವರ್ಷಣಾದ್ ವರ್ಷ ಉಚ್ಯತೇ ।
ಶಂ ರಾತೀತಿ ಶರತ್‌ಪ್ರೋಕ್ತೋ ಹೇಮಂತೋ ಹಿಮಃಕರಣಾದಿತಿ ಚ ॥

ಛಾಂದೋಗ್ಯಭಾಷ್ಯೇ ॥

ದ್ಯುಪರ್ಜನ್ಯಧರಾ ಪುಂಸ್ತ್ರೀ ಸಂಸ್ಥಿತಂ ಪಂಚರೂಪಿಣಂ ।
ನಾರಾಯಣಂ ವಾಸುದೇವಂ ತಥಾ ಸಂಕರ್ಷಣಂ ಪ್ರಭುಂ ।
ಪ್ರದ್ಯುಮ್ನಂ ಚಾನಿರುದ್ಧಂ ಚ ಕ್ರಮಶಾಧ್ಯಾಯಂಸ್ತು ಸರ್ವದಾ ।
ಪಂಚಾಗ್ನಿವಿನ್ನಾಮ ಭವೇತ್ಸಯಾತಿ ಪರಮಾಂಗತಿಂ ॥ ಛಾಂದೋಗ್ಯಭಾಷ್ಯೇ॥

ತಪ್ತಮುದ್ರಾ ತಥಾ ಪುಂಡ್ರಂ ಹರಿಮಂತ್ರಃ ಜಪಸ್ಮೃತಃ ।
ಯೋಗಮಭ್ಯರ್ಚನಂ ವಿಷ್ಣೋಃ ಇತಿ ಸಂಸ್ಕಾರ ಪಂಚಕಂ ॥ ಸ್ಕಾಂದೇ ॥
ಪಂಚಭೂತ ಪ್ರವಿಷ್ಟಾಯ ಪಂಚಪ್ರಾಣಾತ್ಮಕಾಯ ಚ ॥
ಪಂಚಕರ್ಮೇಂದ್ರಿಯೇಶಾಯ ಹಿಂಕಾರಾದ್ಯಾತ್ಮನೇ ನಮಃ ॥ ಆದಿತ್ಯೇ ॥

ಹೃದಯದಿ ರೂಪವು ವದನದಿ ನಾಮವು
ಉದರದಿ ನೈವೇದ್ಯವು ಶಿರದಿ ।
ಪದಜಲ ನಿರ್ಮಾಲ್ಯವ ಧರಿಸುತ ಕೋ
ವಿದರ ಸದನ ಹೆಗ್ಗದವ ಕಾಯುವದೇ ॥ ೭ ॥

ಹೃದಯದಲಿ ತವರೂಪ । ವದನದಲಿ ತವನಾಮ ।
ಉದರದಲಿ ನೈವೇದ್ಯ ಶಿರದಲ್ಲಿ । ಶಿರದಲ್ಲಿ ನಿರ್ಮಾಲ್ಯ
ಪದಜಲಗಳಿರಲು ಭಯವುಂಟೇ॥ (ತತ್ವಸುವ್ವಾಲಿ, ಜಗನ್ನಾಥದಾಸರು)

ಹೃದಿರೂಪಂ ಮುಖೇನಾಮ ನೈವೇದ್ಯ ಮುದರೇ ಹರೇಃ ।
ಪಾದೋದಕಂ ತು ನಿರ್ಮಾಲ್ಯಂ ಮಸ್ತಕೇ ಯಸ್ಯಸೋಽಚ್ಯುತಃ ॥

॥ ಕೃ. ಮ. ॥

ದೇಹಿ ಸದಾ ಸಜ್ಜನಾನಾಂ ಚ ಸಂಗಂ ದಗ್ಧಂ ಕುರು ದುರ್ಜನಾನಾಂ ಚ
ಸಂಗಂ ॥ ಗಾರುಡೇ ॥

ಪಾತ್ರರ ಸಂಗಡ ಯಾತ್ರೆಯ ಚರಿಸಿ ವಿ-
ಧಾತೃ ಪಿತನ ಗುಣಸ್ತೋತ್ರಗಳ
ಶ್ರೋತ್ರದಿ ಸವಿದು ವಿಚಿತ್ರಾನಂದದಿ
ಗಾತ್ರವ ಮರೆದು ಪರತ್ರವ ಪಡೆವುದೆ ॥ ೮ ॥

ಯಾವತ್ಕಾಲಂ ತೀರ್ಥಯಾತ್ರಾಂ ಕರಿಷ್ಯೆ ತಾವದ್ದೇಹಿ ವೈಷ್ಣವಾನಾಂ ಚ
ಸಂಗಂ ।
ಸಂಗೇನ ವಿಷ್ಣು ಭಕ್ತಾನಾಂ ದ್ರೋಹಿಣಾಂ ಪಾಪ್ಯಸಂಗತೇಃ ।
ಕಥಾಂ ಶ್ರುತ್ವಾತು ವೈಕುಂಠ ಪತೇರ್ನಾರಾಯಣಸ್ಯ ಚ ।
ಶ್ರೋತ್ರಾರಾವಹಾ ಮಹಾಪುಣ್ಯಾ ಸದ್ಭಕ್ತ ಮುಖನಿಸೃತಾಃ ।
ನೃತ್ಯದ್ಭಿಃ ಭಗವದ್ಭಕ್ತೈಃ ಸಹ ನೃತ್ಯತಿ ಕೇಶವಃ ॥ ವಾಯು ಪುರಾಣೇ ॥
ವಿಷ್ಣೋಃ ಕಥಾಖ್ಯಾಭರಣೈಶ್ಚ ಯುಕ್ತಂ ತದೇವ ಕರ್ಣಂ ಸುಂದರಂ
ಚಾಹುರಾರ್ಯಾಃ ।
ತಸ್ಮಾತ್ಸದಾ ಭಾಗವತಾರ್ಥಸಾರಂ ಸತಾತ್ಪರ್ಯಂ ಕರ್ಣಪುಟೈಃ ಪಿಬೇತ್ ॥
ಭಾಗವತೇ ॥
ಶೃಣ್ವನ್ ಸುಭದ್ರಾಣಿ ರಥಾಂಗ ಪಾಣೇಃ ಸ್ಪಷ್ಟ್ಯಾದಿ ಕರ್ಮಾಣಿ ॥
ವಿಚಿತ್ರಿತಾನಿ ।
ವೀರ್ಯಾಣಿ ಕಂಸಸ್ಯ ವಧಾದಿಕಾನಿ ಕೃತಾನಿ ವಿಷ್ಣೋರವತಾರಾಂಶ್ಚ ನಿತ್ಯಂ ।
ಭಾಗವತೇ ॥
ಯದಾ ಪ್ರಹರ್ಷಾತ್ ಪುಲಕಾಶ್ರು ಗದ್ಗದಃ ಪ್ರೋತ್ಕಂಠ ಉದ್ಗಾಯತಿ ರೌತಿ
ನೃತ್ಯತಿ ॥ ಗಾರುಡೇ ॥

ಹಂಸ ಮೊದಲು ಹದಿನೆಂಟು ರೂಪಗಳ
ಸಂಸ್ಥಾನವ ತಿಳಿದನುದಿನದಿ ।
ಸಂಸೇವಿಸುವ ಮಹಾಪುರುಷರ ಪದ
ಪಾಂಸುವ ಧರಿಸಿ ಅಸಂಶಯನಾಹುದೆ ॥ ೯ ॥

ಸಮಾಗಮೋಹಿ ಮಹತಾಂ ಸದ್ಯಃಕ್ಷೇಮಾಯ ಕಲ್ಪತೇ ।
ಸರ್ವ-ಧರ್ಮಾಮಹದ್ಭಿಶ್ಚ ಜ್ಞೇಯಾ ಸೂಕ್ಷ್ಮಾ ಸಹಸ್ರಶಃ ।
ತೇಽಪಿ ಶಾಸ್ತ್ರಕಥಾಲಾಪೈಃ ವ್ಯಕ್ತೀಕುರ್ವಂತಿ ಸಜ್ಜನಾಃ ।
ವಾಯು ಪುರಾಣ ಮಾ. ಮ
ಹಂಸ ಶುಚಿಷದಿತಿ । ನಿತ್ಯಂ ಹೀನೋಖಿಲೈರ್ದೋಷೈಃಸಾರರೂಪೋ
ಯತೋ ಹರಿಃ ।
ಹಂಸ ಇತ್ಯುಚ್ಯತೇ (ಯಸ್ಮಾತ್) ತಸ್ಮಾದ್ವಾಯುಸ್ಥಃ ಶುಚಿಷನ್ಮತಃ ।
ವರಃ ಸುರ್ವಸುರಿತ್ಯುಕ್ತಃ ಸ ಏವಹ್ಯಂತರಿಕ್ಷಗಃ ।
ಹೋತಾ ಸರ್ವೇಂದ್ರಿಯಾಂತಸ್ಥೋ ವೇದ್ಯಾಂ ಪೂಜ್ಯಶ್ಚ ವೇದಿಷತ್ ।
ಅತ್ಯನ್ನಶ್ಚಾತಿಥಿ ಪ್ರೋಕ್ತೋ ತಸ್ಮಾದನ್ನ ಚ ಮುಚ್ಯತೇ ॥
ಸದ್ರೋಣಕಲಶೇಸೋಮೋ ಸ್ಥಿತ ಉಕ್ತೋ ದುರೋಣಸತ್ ।

ನ್ಯಮು ಸ್ಥಿತೇಷು ದೇವೇಷು ವರೇಷ್ವಪಿ ಸ ಏವತು ॥
ಋತೇ ರೂಪೇ ತಥಾ ವೇದೇ ವ್ಯೋಮಾಖ್ಯೆ ಪ್ರಕೃತಾವಪಿ ।
ವ್ಯೋತಂ ಜಗದಿದಂ ಯಸ್ಯಾಂ ಸಾ ವ್ಯೋಮ ಶ್ರೀರುದಾಹೃತಾ ॥
ಅಬ್ಜ ಗೋಜಾದ್ರಿಜೇಷ್ವೇವ ಮಾಸ್ತೇ ಅಬ್ಜಾದಿಕಾಸ್ಮೃತಃ ॥
ತಥೈವ ತೇಷು ಮುಕ್ತೇಷು ಗತಾಸ್ತೇ ವಿಷ್ಣುಮಿತ್ಯತಃ ॥
ವೇದೈಃ ಮುಖ್ಯತಯಾ ಪ್ರೋಕ್ತಂ ದ್ಯುತಮ್ಯತ್ಯೇವಚೋಚ್ಯತೇ ।
ಬೃಹತ್ಪೂರ್ಣ ಗುಣತ್ವಾಚ್ಚ ಸ ಏವ ಪುರುಷೋತ್ತಮಃ ।
ನ ಕೇವಲಂ ಪ್ರಾಣಏವ ಚೇತನಾನಾಂ ವಿಧಾರಕಃ ।
ಕಿಂತುವಿಷ್ಣುಂ ಸಮಾಶ್ರಿತ್ಯ ಪ್ರಾಣೋ ಜೀವಾನ್ ಬಿಭರ್ತ್ಯಯಂ ।
ಅತಃ ಮುಖ್ಯಾಶ್ರಯೋ ವಿಷ್ಣುಃ ಚೇತನಾನಾಂ ಸ್ವತಂತ್ರತಃ ।
ವಿಮುಕ್ತೋ ನಿರಭಿಮಾನಾತ್ ಪೂರ್ವಮೇವ ಪರೋಕ್ಷವಿತ್ ।
ಮುಖ್ಯತೋ ಮುಚ್ಯತೇ ಪಶ್ಚಾತ್ ದುಃಖಾದ್ಯಾಭಾಸಹೀನತಃ ॥

॥ ಕಾಠಕ ಭಾಷ್ಯೇ ॥

ವರಗಾಯತ್ರೀ ನಾಮಕ ಹರಿಗೇ
ರೆರಡಂಘ್ರಿಯ ವಿವರವ ತಿಳಿದು
ತರುವಾಯದಿ ಷಡ್ವಿಧರೂಪವ ಸಾ-
ದರದಲಿ ಅನುದಿನ ಧ್ಯಾನಿಸುತಿಪ್ಪುದೆ॥ ॥ ೧೦ ॥

ಸೈಷಾ ಚತುಷ್ಪದಾ ಷಡ್ವಿಧಾಗಾಯತ್ರೀ ತದೇತದ್‌ಋಚಾಭ್ಯುಕ್ತಮ್ ।
ಏತಾವಾನಸ್ಯ ಮಹಿಮಾತೋಜ್ಯಾಯಾಂಶ್ಚಪೂರುಷಃ ಪಾದೋಽಸ್ಯ-
ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ ।
ತನ್ನಿಸೃತತ್ವಾತ್ ವೇದಾನಾಂ ಗಾಯಕಂ ತ್ರಾತಿ ಚಾಖಿಲಂ ।
ಗಾಯತ್ರೀ ನಾಮಕೋ ವಿಷ್ಣುಃ ವಾಸುದೇವ ಪರಃ ಪುಮಾನ್ ।
ಭೂಮಾಭೂಃ ಇತಿ ಪ್ರೋಕ್ತಃ ಪೂರ್ಣತ್ವಾತ್ ಪುರುಷೋತ್ತಮಃ ।
ಸ ಏವ ಭಗವಾನ್ ವಿಷ್ಣುಃ ವಾಜ ನಾಮಾ ವಾಚಿ ಸಂಸ್ಥಿತಃ ॥
ವಚನಾತ್ ಹಯಶೀರ್ಷಾಖ್ಯೋ ಗಾಯತ್ರ್ಯಾಮಪಿ ಸಂಸ್ಥಿತಃ ।
ಸ ಏವ ಭಗವಾನ್ ವಿಷ್ಣುಃ ಪೃಥಿವ್ಯಾಮಪಿ ಸಂಸ್ಥಿತಃ ॥
ಪೃಥುತ್ವಾತ್ ಪೃಥಿವೀನಾಮಾ ಸ ಏವಾಂತ ಶರೀರಗಃ ।
ಪುರುಷೋ ಜೀವ ಉದ್ದಿಷ್ಟಃ ತಸ್ಮಿನ್ನೇವ ಸ್ಥಿತೋ ಹರಿಃ ॥
ಯೋಽಸೌ ಜೀವಸ್ಥಿತೋ ವಿಷ್ಣುಃ ಶರೀರಮಿತಿ ನಾಮಕಃ ।
ಶತ್ವಾಚ್ಚರತಿ ರೂಪತ್ವಾದೀರಣಾಚ್ಚ ಸ ಏವ ತತ್ ॥
ಜೀವ ಚೈತನ್ಯರೂಪಸ್ಯ ಹೃದಯೇಽಪಿ ವ್ಯವಸ್ಥಿತಃ ।

ಅಯನಾತ್ ಹೃದಿ ವಿಷ್ಣುಃ ಸ ಹೃದಯಂ ಕೀರ್ತಿತೋ ಬುಧೈಃ ॥
ಗಾಯತ್ರ್ಯಾ ಸಂಸ್ಥಿತೋ ವಿಷ್ಣುಃ ಸ್ತ್ರೀರೂಪಃ ಸೂರ್ಯಸಪ್ರಭಃ ।
ದ್ವಿತೀಯಶ್ಚೈವ ಮತ್ಸ್ಯಾದಿ ಭೂತಾನಾಮವತಾರಗಃ ॥
ತೃತೀಯೋ ವಾಚಿ ಸಂಸ್ಥಶ್ಚ ಸ್ತ್ರೀರೂಪೋ ಹಯಶೀರ್ಷಕಃ ।
ಚತುರ್ಥಃ ಪೃಥಿವೀ ಸಂಸ್ಥಃ ಸ್ತ್ರೀರೂಪಃ ಪೀತವರ್ಣಕಃ ॥
ಜೀವಸ್ಯಾಂತರ್ಗತೋ ವ್ಯಾಪ್ಯ ಶರೀರಮಿತಿ ನಾಮಕಃ ।
ಪಂಚಮಸ್ತದ್ ಹೃದಿಸ್ಥಶ್ಚ ಷಷ್ಠೋ ಹೃದಯ ನಾಮಕಃ ॥
ಗಾಯತ್ರೀನಾಮಕೋ ವಿಷ್ಣುಃ ಏವಂ ಷಡ್ವಿಧ ಉಚ್ಯತೇ ।
ಭಿನ್ನಪಾದಾಃ ಸರ್ವಜೀವಾಸ್ತಸ್ಯ ಸಾದೃಶ್ಯ ವಶಾತ್ಸ್ಮೃತಃ ॥
ಸ್ವರೂಪ ಪಾದಾ ವಿಷ್ಣೋರ್ಹಿ ತ್ರಯೋಽಪಿ ದಿವಿ ಸಂಸ್ಥಿತಾಃ ।
ನಾರಾಯಣ ವಾಸುದೇವ ವೈಕುಂಠ ಇತಿ ತೇ ತ್ರಯಃ ॥

ಛಾಂದೋಗ್ಯ ಭಾಷ್ಯೇ

ಬಿಗಿದ ಕಂಠದಿಂ ದೃಗ್ಬಾಷ್ಪಗಳಿಂ
ನಗೆಮೊಗದಿಂ ರೋಮಗಳ್ನಿಗೆದು
ಮಿಗೆ ಸಂತೋಷದಿ ನೆಗೆದಾಡುತ ನಾ
ಲ್ಮೊಗ ನಯ್ಯನ ಪದ ಪೊಗಳಿ ಹಿಗ್ಗುವದೇ ॥ ೧೧ ॥

ಭಗವದ್ದರ್ಶನಾಲ್ಹಾದ ಬಾಷ್ಪಪೂರ್ಣಾಕುಲೇಕ್ಷಣಃ ।
ಪುಲಕಾಂಕಿತಾಂಗ ಔತ್ಕಂಠ್ಯಾತ್ ವರ್ಣಯೇತ್ ತದ್ಗುಣಾನ್ ಸದಾ ॥

ಗಾರುಡೇ

ಯೇ ಭಕ್ತಾ ವಿವಶಾಃ ವಿಷ್ಣೋಃ ನಾಮ ವಶಾತ್ತ್ವೈಕ ಜಲ್ಪಕಾಃ ।
ತೇಽಪಿ ಮುಕ್ತಿಂ ವ್ರಜಂತ್ಯಾಶು ಕಿಮುತ ಧ್ಯಾಯಿನಃ ಸದಾ ॥ ಭಾಗವತೇ
ತತ್ರಾಪಿ ಸ್ವಸ್ಥಚಿತ್ತಸ್ತು ಶೃಣ್ವನ್ ವಿಷ್ಣುಕಥಾಂ ಶುಭಾಂ ।
ತಸ್ಯ ಜನ್ಮಾನಿ ನಾಮಾನಿ ಕರ್ಮಾಣಿ ಸುಬಹೂನ್ಯಪಿ ।
ಕೀರ್ತಯೇ-ನ್ನೃತ್ಯಮಾನಃ ಸನ್ ವಿಲಜ್ಜೋ ನಿಸ್ಪೃಹೋಽನಿಶಂ ॥

ವಾಯು ಪುರಾಣೇ

ವಾಗ್ಗದ್ಗದಾ ದ್ರವತೇ ಯಸ್ಯ ಚಿತ್ತಂ ರುದತ್ಯಭೀಕ್ಷ್ಣಂ ಹಸತಿಕ್ವಚಿಚ್ಚ ।
ವಿಲಜ್ಜ ಉದ್ಗಾಯತಿ ನೃತ್ಯತೇಚ ಮದ್ಭಕ್ತಿಯುಕ್ತೋ ಭುವನಂ ಪುನಾತಿ ॥

ಭಾಗವತೇ

ಗೃಹಕರ್ಮಾವ ಬ್ಯಾಸರದಲೆ ಪರಮೋ-
ತ್ಸಹದಲಿ ಮಾಡುತ ಮೂಜಗದ ।
ಮಹಿತನ ಸೇವೆಯಿದೆನುತಲಿ ಮೋದದಿ
ಅಹರಹರ್ಮನದಿ ಸಮರ್ಪಿಸುತಿಪ್ಪುದೆ ॥ ೧೨ ॥

ದಾರಾನ್ ಸುತಾನ್ ಪ್ರಿಯಹಾನ್ ಪ್ರಾಣಾನ್ ಪರಸ್ಮೈಸನ್ನಿವೇದಯೇತ್ ॥

ಸದಾಚಾರಸ್ಮೃತೌ

ಯದ್‌ಬ್ರಹ್ಮಣಿಪರೇ ಸಾಕ್ಷಾತ್ ಸರ್ವಕರ್ಮ ಸಮರ್ಪಣಮ್ ॥ ಭಾಗವತೇ

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್ ।

ಯತ್ತಪಶ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥ ಭಗವದ್ಗೀತಾಯಾಂ

ಗೃಹಕರ್ಮೋತ್ಸವೇ ನೈವ ಕೃತ್ವಾ ಸರ್ವಂ ದಿನೇದಿನೇ ।

ಹರಿಸೇವೇತಿ ಮತ್ವಾತು ಸಂತೋಷೇಣ. ಸಮರ್ಪಯೇತ್ ॥ ಮಾತ್ಸ್ಯೇ ॥

ಕ್ಲೇಶಾನಂದಗಳೀಶಾಧೀನ ಸ-<br>ಮಾಸಮಬ್ರಹ್ಮ ಸದಾಶಿವರು ।<br>ಈಶಿತವ್ಯರು ಪರೇಶ ನಿಲ್ಲದೆ<br>ಶ್ವಾಸಬಿಡುವ ಶಕ್ತಿಲೇಶಿಲ್ಲೆಂಬುದೆ ॥ ೧೩ ॥

ಸೃಷ್ಟಿಸ್ಥಿತಿಃ ಸಂಹೃತಿಶ್ಚ ನಿಯಮೋ ಜ್ಞಾನಬೋಧನೇ ।

ಬಂಧೋ ಮೋಕ್ಷಂ ಸುಖಂ ದುಃಖಂ ಆವೃತಿಃ ಜ್ಯೋತಿ ರೇವಚ ॥

ವಿಷ್ಣುನಾಸ್ಯ ಸಮಸ್ತಸ್ಯ ಸಮಾಸವ್ಯಾಸಯೋಗತಃ ॥ ತತ್ವಸಂಖ್ಯಾನೇ॥

ದೇಶತಃ ಕಾಲತಶ್ಚೈವ ಸಮಾಪ್ರಕೃತಿರೀಶ್ವರೇ ।

ಬ್ರಹ್ಮಾದ್ಯಾಸ್ತು ಅಸಮಾ ಪ್ರೋಕ್ತಾಪ್ರಕೃತಿಶ್ಚ ಸಮಾಸಮೇತಿ ॥

ಬ್ರಹ್ಮಸೂತ್ರಭಾಷ್ಯೇ ॥

ಯಃ ಪ್ರಭುಃ ಸರ್ವಭೂತಾನಾಂ ಸುಖದುಃಖೋಪಪತ್ತಯೇ ॥ ಭಾಗವತೇ

ಸುಖದುಃಖಪ್ರದೋ ವಿಷ್ಣುಃ ಸ್ವಯಮೇವ ಸನಾತನಃ ।

ರಮಾಬ್ರಹ್ಮಾದಯಃ ಸರ್ವೇ ವಿನಾವಿಷ್ಣು ಪ್ರಸಾದತಃ ।

ನ ಶ್ವಸಂತಿ ಯಥಾ ಕಾಮಂ ಕಿಮುತಾನ್ಯೇತ್ಯಜಂತಿ ಹಿ ॥ ಮಾಘ ಮಾ ॥

ಆ ಪರಮಾತ್ಮಗೆ ರೂಪದ್ವಯವು ಪ-<br>ರಾ ಪರತತ್ವಗಳಿದರೊಳಗೆ ।<br>ಸ್ತ್ರೀ ಪುಂ-ಭೇದದಿ ಈ ಪದ್ಮಜಾಂಡವ<br>ವ್ಯಾಪಿಸಿ ಇಹನೆಂದೀಪರಿ ತಿಳಿವುದೇ ॥ ೧೪ ॥

ಪುಂ ಪ್ರಕೃತ್ಯಾತ್ಮಕಾಭ್ಯಾಂಚ ಧತ್ತೇ ನಿತ್ಯಂ ಜನಾರ್ದನಃ ।

ಆಕಾಶೇನ ಯಥಾ ವ್ಯಾಪ್ತಂ ಜಗತ್‌ಸ್ಥಾವರ ಜಂಗಮಂ ।

ತಥೈವ ಹರಿಣಾವ್ಯಾಪ್ತಂ ಜಗತ್‌ಸ್ಥಾವರ ಜಂಗಮಂ ॥ ಹರಿವಂಶೇ

ಏವಂ ದ್ವಿರೂಪೋ ಭಗವಾನ್ ಹರಿರೇಕೋ ಜನಾರ್ದನಃ ॥

ಷಷ್ಠಸ್ಕಂಧ ಭಾಗವತ ತಾತ್ಪರ್ಯೇ

ತತ್ತ್ವಾಭಿಮಾನಿನಃ ದೇವಾನ್ ಬ್ರಹ್ಮಾದೀನಸೃಜತ್ಪ್ರಭುಃ ।
ಲೀಲಾವಿಹಾರ ಸರ್ವಾತ್ಮಾ ಸೃಷ್ಟಿಸ್ಥಿತ್ಯಾದಿಕಂ ಮಹತ್ ।
ಸಕೃತ್ವಾಸ್ತೇ ಸದಾತೇಷು ವರ್ತತೇ ಹರಿರೀಶ್ವರಃ ॥ ಗಾರುಡೇ
ಮಯಾತತಮಿದಂ ಸರ್ವಂ ಜಗದವ್ಯಕ್ತ ಮೂರ್ತಿನಾ ॥ ಭಗವದ್ಗೀತಾಯಾಂ
ಪದ್ಮೋ ಬ್ರಹ್ಮೇತಿ ಸಂಪ್ರೋಕ್ತೋ ಪದ್ಮಾ ಶ್ರೀರಿತಿ ಕೀರ್ತಿತಾ ॥
ಭಾಗವತ ತಾತ್ಪರ್ಯೇ ॥

ಅಪರೇಯಮಿತ ಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇಪರಾಂ ।
ಮತ್ತಃ ಪರತರಂ ಕಿಂಚಿತ್ ನಾನ್ಯದಸ್ತಿ ಧನಂಜಯ ॥ ಗೀತಾಯಾಂ ॥

ಏಕೋತ್ತರ ಪಂಚಾ ಶದ್ವರ್ಣಗ-
ಳೇಕಾತ್ಮನ ನಾಮಂಗಳಿವು
ವಣಕಮಲಾಸನ ಮೊದಲಾದಮರರು
ಸಾಕಲ್ಯದಿ ಇವನರಿಯರೆಂತೆಂಬುದೆ ॥ ೧೫

ಅಜ ಆನಂದ ಇಂದ್ರೇಶಾವುಗ್ರ ಊರ್ಜ ಋತುಂಭರಃ ।
ಋಘಲ್ಯಶೌಲ್ಲೃಜಿರೇಕಾತ್ಮೈರ ಓಜ ಭೃದೌರಸಃ ।
ಅಂತೋಽರ್ಧಗರ್ಭಃ ಕಪಿಲಃ ಖಪತಿರ್ಗರುಡಾಸನಃ ।
ಘರ್ಮೋ ಙಸಾರ ಶ್ಚಾರ್ವಂಗ ಶ್ಛಂದೋಗಮ್ಯೋ ಜನಾರ್ದನಃ ।

ಝಟಿತಾರಿ ರ್ಞಮಷ್ಟಂಕೀ ಠಲಕೋಡರಕೋ ಢರೀ ।
ಣಾತ್ಮಾತಾರಸ್ಥಭೋ ದಂಡೀ ಧನ್ವೀ ನಮ್ಯಃ ಪರಃ ಫಲೀ ।
ಬಲೀ ಭಗೋ ಮನುರ್ಯಜ್ಞೋ ರಾಮೋ ಲಕ್ಷ್ಮೀಪತಿರ್ವರಃ ।
ಶಾಂತಸಂವಿತ್ ಷಡ್ಗುಣಶ್ಚ ಸಾರಾತ್ಮಾ ಹಂಸಳಾಳುಕೌ ॥ ತಂತ್ರಸಾರೇ

ಅಕಾರಾದ್ಯೈಃ ಸರ್ವವರ್ಣೈಃ ವಾಚ್ಯಾ ಏತೇ ಪ್ರಕೀರ್ತಿತಾ ।
ಕ್ಷವಾಚ್ಯೋ ನರಸಿಂಹಸ್ತು ಸರ್ವಜೀವ ನಿಯಾಮಕಃ ॥ ಇತಿ ಪ್ರಕಾಶ ಸಂ ॥
ಮಾ ಬ್ರಹ್ಮರುದ್ರ ವಿಬುಧಾ ಪರಮರ್ಷಯಶ್ಚ ಸರ್ವೇ ಹರೌ ನಿಯತ-
ಬುದ್ಧಿಯುತಾಹಿನಿತ್ಯಂ ।

ಅದೃಷ್ಟಾಶ್ರುತ ಪೂರ್ವಂ ಚ ಲಕ್ಷ್ಮ್ಯಾಚ ಬ್ರಹ್ಮಣಾ ತಥಾ ।
ನೈವ ಸಂಚಿಂತನೀಯಂ ಹಿ ನಿತ್ಯ ದೃಷ್ಟೌ ಚ ತೌ ಸ್ಮೃತೌ ॥
ಲಕ್ಷ್ಮ್ಯಾದೃಷ್ಟಂ ನ ಜಾನಾತಿ ಬ್ರಹ್ಮಾ ಚೈವ ಚತುರ್ಮುಖಃ ।
ನ ಜಾನಂತಿ ಬ್ರಹ್ಮದೃಷ್ಟಂ ದೇವಾರುದ್ರ ಪುರಸ್ಸರಾಃ ॥ ಗಾರುಡೇ
ಸ್ವಯೋಗ್ಯರೂಪಂ ಸರ್ವದಾ ವೇತ್ತಿ ವಿಷ್ಣೋಸ್ತತ್ರಾಪಿ ಜ್ಞಾನಂ ನಾಸ್ತಿ
ಕಿಂಚಿದ್ದ್ವಿಜೇಂದ್ರ ।

ಯಾವತ್‌ಸ್ವರೂಪಂ ಚ ತಥೈವ ಲಕ್ಷ್ಮೀ ವೇಧಾ ನ ಜಾನಾತಿ ಕುತಶ್ಚ ದನ್ಯೇ ।
ತವ ಪ್ರಸಾದಾತ್ ಸ ವಿಜಾನಾತಿ ದೇವೀ ಗುಣಾನ್ ವೇದೋಕ್ತಾನ್
ತದನುಕ್ತಾಂಶ್ಚ ಸರ್ವಾನ್
ತಥಾಪಿ ಸಾ ನ ವಿಜಾನಾತಿ ದೇವೀ ಸಾಕಲ್ಯೇನ ಸದ್ಗುಣಾಂಸ್ತಥಾಸ್ಯ
ಚೈವ ॥ ಗಾರುಡೇ
ಸ್ವತಂತ್ರಸ್ಯ ಹರೇಸ್ತಸ್ಯ ಸಾಕಲ್ಯೇನ ಮಹಾತ್ಮನಃ ।
ಸ್ವರೂಪಂ ನೈವ ಜಾನಂತಿ ರಮಾಬ್ರಹ್ಮಾದಯೋಽಪಿತು ॥ ಭಾಗವತೇ

ಒಂದು ರೂಪದೊಳನಂತ ರೂಪವು
ಪೊಂದಿಪ್ಪವು ಗುಣಗಣ ಸಹಿತ ।
ಹಿಂದೆ ಮುಂದೆ ಎಂದೆಂದಿಗೆ ಶ್ರೀಗೋ-
ವಿಂದಗೆ ಸರಿಮಿಗಿಲಿಲ್ಲೆಂತೆಂಬೋದೆ ॥ ೧೬ ॥

ಏಕರೂಪ ಪರೋ ವಿಷ್ಣುಃ ಸರ್ವತ್ರಾಪಿ ನ ಸಂಶಯಃ ।
ಐಶ್ವರ್ಯಾದ್ರೂಪಮೇಕಂ ಚ ಸೂರ್ಯವದ್ ಬಹುಧೋಯತಃ ॥
ಬ್ರಹ್ಮಸೂತ್ರ ಭಾಷ್ಯೇ
ಅನೇಕೋ ಹ್ಯೇಕತಾಂ ಪ್ರಾಪ್ಯ ಸಂಶೇತೇ ಪ್ರಲಯಾರ್ಣವೇ ॥ ಗಾರುಡೇ
ಏಕರೂಪೋಽಪಿ ಭಗವಾನ್ ಬಹುರೂಪ ಇವೇಯತೇ ।
ಅಚಿಂತ್ಯೈಶ್ವರ್ಯರೂಪತ್ವಾತ್‌ಪೂರ್ಣಾನಂದೈಕ ರೂಪಕಃ ।
ಸ್ವೇಚ್ಛಯಾ ತು ಗುಣಾನ್ ವಿಷ್ಣುಃ ನಾನಾ ರೂಪಂ ಕರೋತ್ಯಜಃ ॥ ಭಾಗವತೇ
ನ ಸಮೋವಾಧಿಕೋ ವಾಪಿ ವಿದ್ಯತೇ ತಸ್ಯಕಶ್ಚನ ।
ನಾಸೀನ್ನಚ ಭವಿಷ್ಯೋವಾ ಪರತಃ ಸ್ವತಏವಚ ॥ ಇತಿಶ್ರುತೇಃ
ನಾಸ್ತಿನಾರಾಯಣ ಸಮಂ ನ ಭೂತೋ ನ ಭವಿಷ್ಯತಿ ॥ ಮಾಯಾವಾದ
ಖಂಡನೇ ॥

ಹರಿಕಥೆ ಪರಮಾದರದಲಿ ಕೇಳುತ
ಮರೆದು ತನುವ ಸುಖ ಸುರಿಯುತಲಿ
ಉರುಗಾಯನ ಸಂದರುಶನ ಹಾರೈ
ಸಿರುಳು ಹಗಲು ಜರಿಜರಿದು ಬಾಳುವದೆ ॥ ೧೭ ॥

ಯಸ್ತು ವಿಷ್ಣು ಕಥಾಲಾಪಪರೋನಿತ್ಯಂ ಮಹಾಮತಿಃ ।
ಸ್ನಾನಂ ಸಂಧ್ಯಾಂ ಸರ್ವಧರ್ಮಾನ್ ಪರಿತ್ಯಜ್ಯ ಹರೇಃ ಕಥಾಂ ॥
ಶೃಣೋತಿ ಭಕ್ತಿಸಂಪನ್ನಃ ಕರ್ಮಪಾಶಾದ್ವಿಮುಚ್ಯತೇ ।
ಕಥಾ ನಿಮಿತ್ತಾತ್‌ಯದಿಕರ್ಮಲೋಪೋ ಭವೇಜ್ಜನೇ ಭಾಗವತೇ
ನೃಲೋಕೇ ॥ ಭಾಗವತೇ ॥

ಗುಣಾನಾಂ ಕರ್ಮಣಾಂ ಚೈವ ಕೀರ್ತನಂ ಚ ಗದಾಭೃತಃ ।
ಗಾಯನ್ ಸ್ಮರನ್ ಇದಂ ನಿತ್ಯಂ ಯತ್ರ ಕುತ್ರಾಪಿ ಸಂಚರೇತ್ ॥
ಏವಂ ಧ್ಯಾತುಃ ಮಹಾವಿಷ್ಣುಸ್ವರೂಪಂ ಬಿಂಬಸಂಜ್ಞಕಂ ।
ಕೃಪಯಾ ದರ್ಶಯತಿಯತ್ ಯಥಾರ್ಯೋಗ್ಯಂ ಮನೋರಮಂ ।
ನಿರ್ದೋಷಂ ಸ್ವಪ್ರಕಾಶಂಚ ಸಚ್ಚಿದಾನಂದ ವಿಗ್ರಹಂ ।
ಸದಾಪುಷ್ಪವಪುಃ ಶೀಘ್ರಂ ಹೃಷ್ಟರೋಮಾಂಚಿತೋ ಮುನಿಃ ।
ಸದಾವಿಷ್ಟ ಮನೋಭೂತ್ವಾ ಪೂರ್ಣಸಂತೋಷ ಸಂಭೃತಃ ।
ನ ವೇತ್ತಿಬಾಹ್ಯಂ ಕಿಮಪಿ ಕುಠಾರೇಣಾಪಿ ಚಾಹತಃ ।
ನ ಸ್ಪೃಶೇಸ್ತು ಸ್ವಮಾಪ್ನೋತಿ ನ ಶೃಣೋತಿ ನ ಪಶ್ಯತಿ ॥ ಭಾಗವತೇ ॥

ವಿಷಯೇಂದ್ರಿಯಗಳ ತದಭಿಮಾನಿ ಸುಮ
ನಸರಲಿ ನಿಂದು ನಿಯಾಮಿಸುವ ।
ಶ್ವಸನಾಂತರ್ಗತ ವಾಸುದೇವ ತಾ ।
ವಿಷಯಂಗಳ ಭೋಗಿಸುತಿಹನೆಂಬುದೆ ॥ ೧೮ ॥

ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ ಗೀತಾ
ದರ್ಶನ ಶ್ರವಣಾಘ್ರಾಣ ಜಿಹ್ವಾಸ್ಪರ್ಶ ಮನಸ್ತಥಾ ।
ತದೀಯಾನ್ ವಿಷಯಾಂಶ್ಚೈವ ಯೋ ವೇದಾಖಿಲಮಂಜಸಾ ।
ಸವಿಷ್ಣು ಪರಮೋಜ್ಞೇಯೋ ದೇವತಾ ಕಾರಣಾನಿ ಚ ।
ಸ ಏತೈಃ ಇಂದ್ರಿಯೈಃ ವಿಷ್ಣು ಭೋಗಾನನುಭವತ್ಯಜಃ ।
ಸ್ವರೂಪೇಣೈವ ರಕ್ತೋಽಪಿ ಜೀವದೇಹ ಸ್ಥಿತೋಹರಿಃ ।
ಭುಂಕ್ತೇ ತದಿಂದ್ರಿಯೈಃ ಭೋಗಾನ್‌ಚ್ಛುರಿತ್ಯೈಃ ಇಂದ್ರಿಯೈಃ ಸ್ವಕೈಃ ।
ಛಾಂದೋಗ್ಯ ಭಾಷ್ಯೇ ॥
ಇಂದ್ರಿಯೇಷು ಚ ದೇವೇಷು ವಿಷಯೇಷು ಸ್ವತೋ ಹರಿಃ ।
ಭುಂಕ್ತೇತು ವಿಷಯಾನ್ ಸರ್ವಾನ್ ವಾಸುದೇವ ಪರಃ ಪ್ರಭುಃ ॥

ಮೂಜಗದೊಳಗಿಹ ಭೂಜಲಖೇಚರ
ಈ ಜೀವದೊಳು ಮಹೌಜಸನ ।
ಸೋಜಿಗ ಬಹುವಿಧ ನೈಜವಿಭೂತಿಯ
ಪೂಜಿಸುತನುದಿನ ರಾಜಿಸುತಿಪ್ಪುದೆ ॥ ೧೯ ॥

ಲೋಕತ್ರಯಸ್ಥ ಜೀವೇಷು ಜಲ ಭೂ ಖೇ ಪರೇಷು ಚ ।
ದಿವ್ಯಾಹ್ಯಾತ್ಮ ವಿಭೂತಿಶ್ಚ ಪೂಜಯಿತ್ವಾ ಪ್ರಕಾಶಯೇತ್ ॥ ಮಾಧವಾ ॥

ಶ್ರೀ ಬ್ರಹ್ಮರುದ್ರ ಪೂರ್ವೇಷು ಕ್ರಮಶಾತ್ ಸ್ಥಿತ್ವಾ ಜನಾರ್ದನಃ ।
ಏವಂ ಸುರಾಸುರ ನರೇಷ್ವಾಸ್ಥಿತೋ ಭಗವಾನ್ ಹರಿಃ॥ ಭಾಗವತ ದ ತಾ.
ಪ್ರತಿಮಾಯಾಮ್ ಹರೇಃರೂಪಂ ತಿರ್ಯಜ ನರ ಸುರಾದಯಃ ।
ಸ್ವಾತ್ಮಾನಮರ್ಚಯಂತ್ಯದ್ಧಾ ಬಹಿರಂತಶ್ಚ ಸತ್ಸುಚ ॥

ಮೇದಿನಿ ಪರಮಾಣ್ವಂಬು ಕಣಂಗಳ
ನೈದಬಹುದು ಪರಿಗಣನೆಯನು ।
ಮಾಧವನಾನಂದಾದಿ ಗುಣಂಗಳ
ನಾದಿಕಾಲದಿಂದಗಣಿತವೆಂಬುದೆ ॥ ೨೦ ॥

ನಕ್ಷತ್ರಾಣಿ ನ ಗಣ್ಯಂತೇ ಪಾಂಸವಶ್ಚ ಕಣಾದಯಃ ।
ತ್ವದ್ವೀರ್ಯಾಣಿ ನ ಗಣ್ಯಂತೇ ಬ್ರಹ್ಮಣಾ ರಮಯಾಪಿ ವಾ ॥ ಆದಿತ್ಯ ಪುರಾಣೇ
ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇರಜಾಂಸಿ
ಇತಿಶ್ರುತೇಃ ।
ಅಗಣಿತ ಗುಣಗಣಮಯ ಶರೀರ ಹೇ ವಿಗತಗುಣೇತರ ಭವಮಮ
ಶರಣಮ್ ॥ ದ್ವಾ. ಸ್ತೋ

ಗುಣಕಾಲಾಹ್ವಯ ಅಗಮಾರ್ಣವ ಕುಂ-
ಭಿಣಿ ಪರಮಾಣ್ವಂಬುಧಿಗಳಲಿ ।
ವನ ಗಿರಿ ನದಿ ಮೊದಲಾದದರೊಳಗಿಂ-
ಧನಗತಪಾವಕನಂತಿಹನೆಂಬುವದೆ ॥ ೨೧ ॥

ಸ್ವೇಚ್ಛಯಾತು ಗುಣಾನ್ವಿಷ್ಣುಃ ನಾನಾರೂಪಂ ಕರೋತ್ಯಜಃ ।
ಗುಣಾನಾಮಾಶ್ರಯತ್ವಾತ್ತು ಭವೇತ್ ಸಗುಣಚ್ಛಂಹಿತಃ ॥ ಭಾಗವತ.ದ.ತಾ.॥
ಕಾಲಸ್ಯ ಪ್ರೇರಕೋ ವಿಷ್ಣುಃ ಸರ್ವಸ್ಯ ಪ್ರೇರಕೋಯತಃ ॥ ಗಾರುಡೇ ॥
ಸ್ಥಿತೋ ವಿಷ್ಣು ಸರ್ವಕರ್ತಾ ಪೃಥಕ್ ಸಂಸ್ಥಶ್ಚ ಸರ್ವಶಃ ।
ಗುಣಕರ್ಮ ಸ್ವಭಾವಾದಿ ಶಬ್ದವಾಚ್ಯಶ್ಚ ಕೇಶವಃ ॥
ಗಿರ್ಯಾದಿ ಸ್ಥಿತ ಮಾತ್ಮಾನಂ ಪೂಜಯಾಮಾಸ ಪಲ್ಲವೈಃ ॥
ಯಥಾ ಪರಿಮಲಃ ಪುಷ್ಪೇ ತ್ವಿಂಧನೇ ವರ್ತತೇಽನಲಃ ॥
ಏವಂ ದೇಹಾಸ್ಸರ್ವಗತೋ ವಿಷ್ಣುಃ ಸರ್ವೇಷಾಂ ಚ ನಿಜೇಚ್ಛಯಾ ॥
ಇತಿ ಮಾತ್ಸ್ಯೇ

ಗಿರಿಗುಲ್ಮವರಾದೀನಾಂ ನದ್ಯಾದೀನಾಂ ತ ಥೈವ ಚ ।
ಸಾನಿಧ್ಯಂ ಲೋಕನಾಥಸ್ಯ ಸರ್ವದಾ ವರ್ತತೇ ಹರೇಃ ॥ ಹರಿವಂಶೇ ॥

ಅನಲಂಗಾರದಲಿಪ್ಪೋಪಾದಿಲಿ
ಅನಿರುದ್ಧನು ಚೇತನರೊಳಗೆ ।
ಕ್ಷಣಬಿಟ್ಟಗಲದಲೇಕೋ ನಾರಾ-
ಯಣ ಶ್ರುತಿ ಪ್ರತಿಪಾದ್ಯನು ಇಹನೆಂಬುದೆ ॥ ೨೨ ॥

ಜೀವಸ್ಥಸ್ತ್ವನಿರುದ್ಧೋಯಃ ಸೋಹಂಕಾರ ಇತೀರಿತಃ ।
ಸೋಪ್ಯಣುತ್ವೇಪಿ ಸಂವ್ಯಾಪೀ ಪರಮೈಶ್ವರ್ಯ ಯೋಗತಃ ॥
ಛಾಂದೋಗ್ಯ ಭಾಷ್ಯೇ
ಅಂಗಾರೇ ವರ್ತತೇ ವಹ್ನಿಃ ಯಥಾ ಬ್ರಹ್ಮಾದಿಕೇಷುಚ ।
ಚೇತನೇಷು ಸ್ಥಿತೋ ವಿಷ್ಣುಃ ವ್ಯಾಪ್ತಸತ್ತ್ರಸುರೀಶ್ವರಃ ॥ ಇತಿ
ತದಾಶ್ರಿತಂ ಜಗತ್‌ಸರ್ವಂ ನಾಸೌಕುತ್ರ ಚಿದಾಶ್ರಿತಃ ।
ಏಕೋ ನಾರಾಯಣ ಆಸೀನ್ನಬ್ರಹ್ಮಾನ ಚ ಶಂಕರಃ ॥ ಇತಿ ಶ್ರುತೇಃ

ಪಕ್ಷ್ಮಗಳಕ್ಷಿಗಳ್ ರಕ್ಷಿಸುವಂದದ
ಲಕ್ಷರ ಪುರುಷನಪೇಕ್ಷೆಯಲಿ ।
ಕುಕ್ಷಿಯೊಳಬ್ಜಜ ತ್ರ್ಯಕ್ಷಾದ್ಯಮರರ
ಈಕ್ಷಿಸಿ ಕರುಣದಿ ರಕ್ಷಿಪನೆಂಬುದೆ ॥ ೨೩ ॥

ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋಮಹಾನ್ ।
ಮಯಿಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ ಗೀತಾ ॥
ಯೋಽಸೌ ನಿಯಮಯನ್ ಜೀವಂ ಕ್ಷೇತ್ರಜ್ಞ ಇತಿ ಶಬ್ದಿತಃ ಹರಿವಂಶೇ ॥
ದೃಷ್ಟ್ವಾಸ ಚೇತನಗಣಾನ್ ಜಠರೇ ಶಯಾನಾನ್ ಆನಂದ ಮಾತ್ರ-
ವಪುಷ ಸ್ಮೃತಿ ವಿಪ್ರಮುಕ್ತಾನ್ ॥ ತಾ. ನಿ. ॥
ಬ್ರಹ್ಮರುದ್ರಾದಿಕಾನ್ ದೇವಾನ್ ಕುಕ್ಷೌ ನಿಕ್ಷಿಪ್ಯ ಕೇಶವಃ ।
ಕೃಪಯಾ ಪರಯಾದೃಷ್ಟ್ವಾ ರಕ್ಷತೀಶೋ ಮಹಾಪ್ರಭುಃ ॥
ವಾಮನ ಪುರಾಣೇ

ಪವನಮತಾನುಗರವ ನಾನಹುದೆಂ-
ದವನಿಯೊಳಗೆ ಸತ್ಯವಿಜನರ ।
ಭವನಗಳಲಿ ಸಂಚರಿಸುತ ಸುಕಥಾ
ಶ್ರವಣ ಮಾಡುತ ಪ್ರವರನಾಗುವದೆ ॥ ೨೪ ॥

ದೇವತಾತಾರತಮ್ಯಂಚ ಜ್ಞಾತ್ವಾ ವಾಯುಮತಾನುಗಃ ।
ಸಜ್ಜನಾನಾಂಗೃಹಂ ಗತ್ವಾಸತ್ಕಥಾಃ ಶೃಣುಯಾತ್ ಹರೇಃ ॥

ಸರ್ವಪಾಪವಿನಿರ್ಮುಕ್ತಃ ಸಯಾತಿ ಪರಮಾಂಗತಿಂ ॥ ವಾಮನ ಪುರಾಣೇ ॥
ಜ್ಞಾನಸ್ಯ ಕರ್ಮಣಶ್ಚಾಪಿ ಶ್ರವಣಂ ಕಾರಣಂ ತತಃ ॥
ಸಂಕುಚ್ಯ ಸರ್ವಕರ್ಮಾಣಿ ಶ್ರವಣಂ ಚಾಭ್ಯಾಸಯೇತ್ಸುಧೀಃ ॥ ವಾಯುಪು ॥
ತದೈವ ಶ್ರಾವ್ಯಂ ಸರ್ವದಾ ವಿಷ್ಣುಬುದ್ಧ್ಯಾ ನಾಸ್ಮಾತ್ ಶ್ರಾವ್ಯಂ ಸಾಧನಂ
ತನ್ನಚೈವ ।
ಯಸ್ಮಿನ್ ದಿನೇ ಶ್ರವಣಂ ನಾಸ್ತಿ ವಿಷ್ಣೋಃ ಕಥಾಶ್ಚ ಜನ್ಮೈವ ಚ ವ್ಯರ್ಥ
ಭೂತಂ ॥
ಸ್ನಾನಂ ತಪಃ ಪಂಚಯಜ್ಞಂ ಚ ಕೃಚ್ಛ್ರಂ ಚಾಂದ್ರೋಪೋಷ್ಯಂ
ಇಷ್ಟಪೂರ್ತಂ ಚ ದತ್ತಂ ॥
ಸರ್ವಂ ವ್ಯರ್ಥಂ ವೈಷ್ಣವಾನಾಂ ಚ ದೀಕ್ಷಾಕಥಾಂವಿನಾ ಸಮ್ಯಗನುಷ್ಠಿತಾಶ್ಚ ।
ಯೈಃ ನ ಶ್ರುತಂ ವೈಷ್ಣವಾಖ್ಯಂ ಪುರಾಣಂ ಯೈರ್ನ ಶ್ರುತಂ ಗಾರುಡಂ
ಬ್ರಹ್ಮಕಾಂಡಂ ॥
ತೇಷಾಂ ಜನ್ಮ ವ್ಯರ್ಥಮಾಹುಃ ಮಹಾಂತಃ ತಸ್ಮಾತ್ ಶ್ರಾವ್ಯಾ
ಪರಿವಾರ್ತಾ ಸದೈವ ॥ ಗಾರುಡೇ
ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿಸ್ತಥೈವಚ ।
ಸಾಧನಂ ಜ್ಞಾನ ಸಂಪತ್ತೌ ಪ್ರಧಾನಂ ನಾನ್ಯದಿಷ್ಯತೇ ॥ ಬೃಹದ್ಭಾಷ್ಯೇ ॥
ಶೃಣ್ವತಾಂ ವದತಾಂ ಚೈವ ಪುರಾಣಂ ಮೋಕ್ಷದಾಯಕಂ ।
ತಸ್ಮಾತ್ ಸರ್ವಪ್ರಯತ್ನೇನ ಶ್ರೋತವ್ಯಂ ಜನ್ಮಜನ್ಮನಿ ॥ ಹರಿವಂಶೇ ॥
ನ ತೀರ್ಥಯಾತ್ರಾ ನ ಚ ದಾನಯಜ್ಞೌ ವ್ರತಸ್ತಪೋನಾರ್ಚನ
ಮನ್ಯದೈವತಂ ।
ಯತ್ ಶ್ರೀನಿವಾಸಸ್ಯ ಚ ನಾಮಕೀರ್ತನಂ ತದೈವ ಸರ್ವಾರ್ಥಸುವೃಷ್ಟಿ
ಕಾರಣಂ ॥
ಯಾತ್ರಾಯಜ್ಞಾ ವ್ರತಾಧರ್ಮಾ ದಾನಾನಿಸುಬಹೂನ್ಯಪಿ ।
ತವನಾಮ ಸ್ಮೃತೇರ್ಭಕ್ತ್ಯಾಕಲಾಂ ನಾರ್ಹಂತಿ ಷೋಡಶೀಮ್ ॥
ಅಹೋಭಾಗ್ಯ ಮಹೋಭಾಗ್ಯಂ ವಿಷ್ಣುನಾಮಾನುಕೀರ್ತನಂ॥ ಆದಿತ್ಯಪುರಾಣೇ॥

ಕಾರಣ ಕಾರ್ಯಾಂತರ್ಗತ ಅಂಶವ
ತಾರಾವೇಶ ವಿಹಿತ ಸಹಜ ।
ಪ್ರೇರಕ ಪ್ರೇರ್ಯಾಹ್ವಯ ಸರ್ವತ್ರ ವಿ-
ಕಾರವಿಲ್ಲದಲೆ ತೋರುವನೆಂಬುದೇ ॥ ೨೫ ॥

ಏವಂ ಕಾರಣ ಕಾರ್ಯಾಖ್ಯಂ ಸಮಸ್ತಂ ಹರಿ ಮೇವತು ॥ ಭಾಗವತೇ
ಏವಂ ನಾನಾ ಗುಣೈರ್ವಿಷ್ಣುಃ ನಾನಾ ನಾಮಭಿರೀರಿತಃ ।
ನಾನಾ ಪ್ರಾಣ್ಯಾದಿ ಸಂಸ್ಥಶ್ಚ ವಿಭೂತಿರಿತಿ ಶಬ್ದಿತಃ ॥ ಗೀತಾತಾತ್ಪರ್ಯೇ ॥

ಪ್ರೇರಕ ಪ್ರೇರ್ಯ ರೂಪೇಣ ವರ್ತತೇ ಸರ್ವದಾ ಹರಿಃ ।
ಅವತಾರಮಿದಂ ಪ್ರೋಕ್ತಂ ಪೂರ್ಣತ್ವಾದೇವ ಸುವ್ರತ ॥ ಗಾರುಡೇ ॥
ವಿಕಾರ ಹೇತುಕಂ ಸರ್ವಂ ಕುರುತೇ ನಿರ್ವಿಕಾರವಾನ್ ॥ ಬ್ರಹ್ಮಸೂತ್ರಭಾಷ್ಯೇ॥

ಪ್ರತಿದಿವಸ ಶ್ರುತಿಸ್ಮೃತಿಗಳಿಂದ ಸಂ-
ಸ್ತುತಿಸುತ ಲಕ್ಷ್ಮೀಪತಿ ಗುಣವ ।
ಕೃತಿಪತಿ ಸೃಷ್ಟಿಸ್ಥಿತಿಲಯಕಾರಣ
ಇತರ ದೇವತೆಗಳಿಗಿನಿತಿಲ್ಲೆಂಬುದೆ ॥ ೨೬ ॥

ವಿಷ್ಣೋರೇಕೈಕ ನಾಮಾಪಿ ಸರ್ವ ವೇದಾಧಿಕಂ ಮತಂ ।
ನಾಮ್ನಾ ಸಂಕೀರ್ತ್ಯತೇ ನಿತ್ಯಂ ಕಿಂ ತಸ್ಯ ಸುಕೃತೈಃ ಪರೈಃ ॥
ತಸ್ಮಾತ್ ನಾಮಾಮೃತಂ ನಿತ್ಯಂ ಸೇವನ್ ನಿರ್ವೃತಿ ಮಾಪ್ನುಯಾತ್ ।
ನಾನೇನ ಸದೃಶೋ ಮಂತ್ರೋಲೋಕೇ ನಾಸ್ತಿಯುತಃ ಪುಮಾನ್ ॥
ರಂತಃ ಸ್ಮರಯಂತಶ್ಚ ವಿಷ್ಣೋರ್ನಾಮಾಪಿ ನಿತ್ಯಶಃ ।
ಯೇ ಸ್ಮರಂತಿ ದಿವಾರಾತ್ರಂ ತೇ ಗಚ್ಛಂತಿ ಹರೇಃ ಪದಂ ॥ ವಾಯುಪುರಾಣೇ
ಸೃಷ್ಟ್ವಾಪಾತ್ಯಾಚ ಸಂಹರ್ತಾ ಸ ಏಕೋ ಹರಿರೀಶ್ವರಃ ॥ ಇತಿ ಭಾಗವತೇ ॥
ಸೃಷ್ಟತ್ವಾದಿಕಮನ್ಯೇಷಾಂ ದಾರು ಯೋಷಾವದುಚ್ಯತೇ ॥
ಬ್ರಹ್ಮಸೂತ್ರಭಾಷ್ಯೇ ॥

ಪನ್ನಗಾಚಲ ಸನ್ನಿವಾಸ ಪಾ-
ವನ್ನಚರಿತ ಸದ್ಗುಣ ಭರಿತ ।
ಜನ್ಯಜನಕ ಲಾವಣ್ಯನೇಕ ಜ
ಗನ್ನಾಥ ವಿಠಲನಾನನ್ಯವನೆಂಬುದೆ ॥ ೨೭ ॥

ಶೇಷಾಚಲ ನಿವಾಸೀತು ಪೂತಕವರ್ಣ ದಯಾನಿಧಿಃ ।
ಶ್ರೀನಿವಾಸೋ ಜಗನ್ನಾಥೋ ಪರೇ ಪಾಲ್ಯಃ ಕದಾಪಿ ನ ॥
ಅನಂತವೇದ ಸಂವೇದ್ಯಂ ನಿರ್ದೋಷಂ ಗುಣಸಾಗರಂ ।
ಗಂಗಾದಿತೀರ್ಥಜನಕಂ ಪಾದಪದ್ಮಂ ಸುತಾರಕಂ ॥ ಆದಿತ್ಯಪುರಾಣೇ ॥

ಯೋನಃ ಪಿತಾ ಜನಿತಾ ಇತಿ ಶ್ರುತಿಃ ।
ಏತತ್ ಶಾಸ್ತ್ರ ಪ್ರವಕ್ತಾರಂ ಯಥಾ ವಿಭವಮರ್ಚಯೇತ್ ।
ಅಪೂಜಯಿತ್ವಾವಕ್ತಾರಂ ಯಃ ಶೃಣೋತಿ ಕಥಾಂ ಇಮಾಂ ।
ಇಕ್ಷು ಯಂತ್ರೇ ಚಿರಂ ಸ್ಥಿತ್ವಾಭುವಿ ವ್ಯಾಲೋಹಿ ಯಾತ್ಯತೇ ॥೨೮॥

ಶ್ರೀ ಭಾರತೀರಮಣಾಂತರ್ಗತ ಶ್ರೀ ಕೃಷ್ಣಾರ್ಪಣಮಸ್ತು

# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೬ | ೮ | ಅಜಾಮಿಳನು | ಅಜಾಮಿಳನ |
| ೬ | ೧೩ | ಸಂಕರಾಷಣ | ಸಂಕರುಷಣ |
| ೧೫ | ೨೭ | ಆದರ | ಅವರ |
| ೧೬ | ೩ | ಕ್ರಿಯಹಾ | ಶ್ರಿಯಹಾ |
| ೧೬ | ೧೩ | ಪ್ರವಿಷ್ಟ | ಪ್ರದಿಷ್ಟ |
| ೨೧ | ೮ | ಪ್ರಮತ್ನ | ಪ್ರಮತ್ತ |
| ೨೩ | ೧೭ | ಅಮೃತಸ್ಯೈವ | ಅಮೃತಸ್ಯೈಷ |
| ೨೬ | ೨೫ | ಪಂಜಿರೇ | ಪಂಜರೇ |
| ೨೭ | ೧ | ಇಚ್ಛನ್ನಿತ್ರೋ | ಇಚ್ಛನ್ನಿತೋ |
| ೨೭ | ೧೭ | ಕ್ರೋಧ | ಕ್ರೋಧವಿಷ |
| ೩೦ | ೧೯ | ಕಥಾನುಸಾರವಾ್ | ಕಥಾಸುಸಾರವಾ್ |
| ೩೨ | ೯ | ದೂರಿಭೃತ್ | ದರಾರಿಭೃತ್ |
| ೩೨ | ೨೪ | ವಿಧುನೋಪಿ | ವಿಧುನೋತಿ |
| ೪೧ | ೧೭ | ದಾಟಲು | ದಾಟಲು ಭಗವಂತನ ಪಾದಕಮಲ ಗಳೆಂಬ ನೌಕೆಯನ್ನು ಆಶ್ರಯಿಸ ಬೇಕು. ಮತ್ತು |
| ೪೫ | ೧ | ಹರಿಸ್ಮರಣೆ | ಹರಿಸ್ಮರಣೆ |
| ೪೬ | ೧೫ | ಕಿಮುಪಾತ್ರಿಯತೆ | ಕಿಮುಪಾಕ್ರಿಯತೆ |
| ೫೬ | ೨೪ | ಗಲ್ಲುವದು | ಗೆಲ್ಲುವದು. |
| ೫೯ | ೧೦ | ಸಂಸ್ಕಾರ | ಸಂಸಾರ |
| ೬೧ | ೨೧ | ಅಲ್ಪಸುಖಸುಖಕ್ಕಾಗಿ | ಅಲ್ಪಸುಖಕ್ಕಾಗಿ |
| ೬೨ | ೪ | ಕೌಂಡರವ್ಯ | ಕೌಂತರವ್ಯ |
| ೬೨ | ೨೯ | ಸೋಽಥಸುಪರ್ಣ | ಸೋಽಧಸುಪರ್ಣ |
| ೬೬ | ೧೬ | ಕುಷ್ಮತಿ | ಕುಪ್ಮತಿ |
| ೬೭ | ೬ | ಇವದ್ವಿಜಿ | |



